# ಅಜಾದಿ ಭಗವದ್ರೂಪಗಳು

## ವಿರಾಟ ರೂಪ ದರ್ಪಣ



ಪ್ರಕಾಶಕರು : ಶ್ರೀ ಗುರುಮಧ್ವರಾವ್ ಉಪ್ಪಲಿ ಕೃಪಾಪೋಷಿತ ಶ್ರೀ ಶೇಷದಾಸರ
ಆರಾದನಾ ಸೇವಾ ಸಂಘ, ಬೆಂಗಳೂರು

# ಅಜಾದಿ ಭಗವದ್ರೂಪಗಳು

ವಿರಾಟ ರೂಪ ದರ್ಪಣ

ಪ್ರಕಾಶನ :-

ಶ್ರೀ ಗುರುಮಧ್ವರಾವ್ ಉಪ್ಪಲಿ

ಕೃಪಾಪೋಷಿತ ಶ್ರೀ ಶೇಷದಾಸರ ಆರಾಧನಾ ಸೇವಾ ಸಂಘ

ಬೆಂಗಳೂರು

ಹೆಸರು - ಅಜಾದಿ ಭಗವದ್ರೂಪಗಳು
- ವಿರಾಟ ರೂಪ ದರ್ಪಣದ ಚಿತ್ರಣ

ಪ್ರತಿಗಳು - 2000

ಬೆಲೆ - ರೂ. 30-00

ಪ್ರಕಾಶಕರು :
ಶ್ರೀ ಗುರುಮಧ್ವರಾವ್ ಉಪ್ಪಲಿ ಕೃಪಾಪೋಷಿತ
ಶ್ರೀ ಶೇಷದಾಸರ ಆರಾಧನಾ ಸೇವಾ ಸಂಘ,
ಬೆಂಗಳೂರು

ಮುದ್ರಣ :-
**ಪದ್ಮ ಪ್ರಿಂಟರ್ಸ್**
200, 1ನೇ ಮೈನ್, 1ನೇ ಕ್ರಾಸ್,
ದತ್ತಾತ್ರೇಯ ಬಡಾವಣೆ, ಕೆ.ಜಿ.ನಗರ, ಬೆಂಗಳೂರು - 19.
ದೂರವಾಣಿ - 26507009, 26605447

॥ ಶ್ರೀ ವಿಜಯ ರಾಜೋ ವಿಜಯತೇ ॥

# ಭಲ್ಲೂಕ ಗುಡ್ಡದಿಂದ ಸಂದೇಶ ಬಂದಿದೆ.

ಜಾಂಬವಂತನಿದ್ದ ಗುಹೆ ಅದು. 'ಜಾಂಬವತಿ'ಯನ್ನು ಶ್ರೀಕೃಷ್ಣ ವರಿಸಿದ್ದು ಇಲ್ಲಿಯೇ. 'ಶ್ಯಮಂತಕಮಣಿ'ಯ ಪ್ರಸಂಗ ಪ್ರಾರಂಭವಾಗಿದ್ದೂ ಇಲ್ಲಿಯೇ.ಹಾಗಾಗಿ 'ಕರಡಿ'ಗೂ ಕಮಲನಾಭನಿಗೂ ನಂಟು ಸಾಮಾನ್ಯವಾಗಿ 'ಕರಡಿ'ಗಳಿಗೆ ಹಲಸಿನಹಣ್ಣು ಮತ್ತು ಜೇನುತುಪ್ಪ ಇಷ್ಟದ ತಿಂಡಿಯಂತೆ. ಆದರೆ ಈ ಕರಡಿಗೆ ಹರಿಕಥಾಮೃತ ಮತ್ತು ಅದರ ಸಾರ ಅತಿ ಇಷ್ಟ. ಭಗವದ್ಭಕ್ತರ ಜೀವನ ಸಂಪುಟವನ್ನು ಒಮ್ಮೆ ತಿರುವಿ ಹಾಕಿದಾಗ. ಲೋಭಿಯಾಗಿದ್ದ ಶ್ರೀನಿವಾಸ – 'ಪುರಂದರದಾಸ'ನಾದ, ಪಾಳೇಗಾರನಾಗಿದ್ದವ – 'ಕನಕದಾಸ'ನಾದ, ಖಜಾನೆಯ ಯಜಮಾನ – ಮೊದಲಕಲ್ 'ಶೇಷದಾಸ'ನಾದ, ಶ್ಯಾನುಭೋಗನಾದವ – 'ಗುರುಮಧ್ವರಾವ್ ಉಪ್ಲಿ'ಯಾದ, ಸಿರಿವಂತ ಗೋರೆಬಾಳ ಹನುಮಂತರಾವ – 'ಸುಂದರ ವಿಠ್ಠಲ'ನಾದ ಶ್ರೀಹರಿಯ ಸಂಕಲ್ಪದಂತೆ ಯಾವುದೇ ಪ್ರಸಂಗದಿಂದ ಇವರೆಲ್ಲಾ 'ವಿಠಲ'ನನ್ನು ಅಪ್ಪಿಕೊಂಡು ಒಪ್ಪಿಕೊಂಡವರು.

ಲೌಕಿಕ ವಿದ್ಯುತ್ ಹರಿಸುತ್ತಿದ್ದ 'ಗೋಪಾಲರಾವ್' ಜನ್ಮಜನ್ಮಾಂತರದ ಸ್ಮರಣೆ, ಶ್ರೀಕೃಷ್ಣನ ಸಂಕಲ್ಪದಂತೆ 'ಗೋಪಾಲದಾಸ'ರಾದರು. ನರ–ನಾಡಿಗಳಲ್ಲಿ 'ಹರಿ' ಎಂಬ ವಿದ್ಯುತ್ತನ್ನು ಹರಿಸುತ್ತಾ ಹರಿಕಥಾಮೃತಸಾರದ ಹರಿಕಾರರಾಗಿ ಮಾನವಿ, ಸಿಂಧನೂರು, ಗಂಗಾವತಿ ಭಾಗದ ದಾಸಶ್ರೇಷ್ಠರ ರಾಯಭಾರಿಯಾಗಿ ಬಾರಿ ಬಾರಿಗೆ ನಮ್ಮನ್ನು ಲೌಕಿಕ ಸೆಳೆತದಿಂದ ಎಚ್ಚರಿಸುತ್ತಿದ್ದಾರೆ. ಸಾಮಾನ್ಯರಿಗೆ ಒಲಿಯದ ಗ್ರಂಥವೆಂದರೆ ಅದು 'ಹರಿಕಥಾಮೃತಸಾರ' ಅದೊಂದು ಸಾಗರ. ಅಲ್ಲಿ ಈಜಬೇಕೆಂದರೆ ಈಶನಿಗೆ ದಾಸನಾಗಬೇಕು. ಅಂತಹ ದಾಸರಿಗೆ ಮಾತ್ರ ಅಲ್ಲಿ ಈಜಾಡಲು 'ಅನಂತಶಯನನ' ಅನುಮತಿ ಸಿಗುವುದು. ಸಜ್ಜನರಿಗೆ ತಾವು ಕಂಡು ಆನಂದಿಸಿದ ಹರಿಯ ಕಾರುಣ್ಯದ ಪರಿಯನ್ನು ಪರಿ ಪರಿಯಾಗಿ ಹೇಳುವ ಕಾಯಕ ಗೋಪಾಲದಾಸರದ್ದು. ನಿರ್ವಂಚನೆಯಿಂದ – ನಿರ್ಮಾತ್ಸರ್ಯದಿಂದ ಗೋವಿಂದನ ಮಹಿಮಾತಿಶಯವನ್ನು ಮನಸಿಗೆ ನಾಟುವಂತೆ ಹೃದಯದಲ್ಲಿ ನಾಟಿ ಮಾಡುತ್ತಿದ್ದಾರೆ. ಅದಕ್ಕೆ ನಾವು ಭಕ್ತಿ ಎಂಬ ನೀರನ್ನು ಹಾಕಿದರೆ ಸಾಕು. ಎಂದೋ ಒಂದು ದಿನ ನಮ್ಮ ಹೃದಯದಲ್ಲಿಯೂ ಹಯವದನ ನೆಂಬ "ಕಲ್ಪವೃಕ್ಷ" ವನ್ನು ಬೆಳಸಲು ಸಾಧ್ಯವಿದೆ, ಇಂಥಹ ಸಾಧ್ಯತಗಳ ಬಗ್ಗೆ ಭರವಸೆ ಮೂಢಿಸುವ ಪ್ರಯತ್ನವೇ ಈ ಕೃತಿ, ರಮಾಧವನ ರೂಪಗಳ ಚಿಂತನೆ ಅಪರೂಪ, ರುಕ್ಮಿಣೀಶನ ರೂಪ ಸೆರೆಹಿಡಿಯುವುದು ಸುಲಭವಲ್ಲ. ಪಾರ್ಥನಿಗೆ ತೇರಿಸಿದ ವಿಶ್ವರೂಪ, ತಾಯಿ ಯೇಶೋದೆಗೆ ತೋರಿಸಿದ ಆ "ರೂಪ" ದ ದೃಶ್ಯ ತುಣಕಗಳು ಮಾತ್ರ ; 'ಭಾಗವತ'ದಲ್ಲಿ 'ತಾತ್ಪರ್ಯನಿರ್ಣಯ'ದಲ್ಲಿ 'ದ್ವಾದಶಸ್ತೋತ್ರ'ದಲ್ಲಿ, 'ದಶಾವತಾರ'ಸ್ತವನದಲ್ಲಿ 'ಕೇಶವ ನಾಮ' ದಲ್ಲಿ ದಾಸಚತುಷ್ಟಯರ ಪದ–ಪದ್ಯ ಸುಳಾದಿಗಳಲ್ಲಿ ಬಂದಿದೆ. ಇಂಥಹ ರೂಪಗಳ ಸಂಕಲನ ಅದೊಂದು ಚೆಂದದ ಅಲಂಕರಣ

ವೇದಗಳಲ್ಲಿ, ಅಕ್ಷರ–ಅಕ್ಷರಗಳಲ್ಲಿ, ನಾಡಿಗಳಲ್ಲಿ–ಹೃದಯದಲ್ಲಿ–ದೇಹ ರಥದಲ್ಲಿ, ನದಿಗಳಲ್ಲಿ, ರೂಪ–ದಿನ–ಮಾಸ–ಪಕ್ಷಗಳಲ್ಲಿ, ಚಾತುರ್ವರ್ಗಗಳಲ್ಲಿ, ಚಕ್ರಾದಿ ಆಯುಧಗಳಲ್ಲಿ, ಕ್ಷೀರ–ದಧಿ–ಘೃತ ಮೂದಲಾದ ಪದಾರ್ಥಗಳಲ್ಲಿ, ಚತುರ್ದಶ ಲೋಕಗಳಲ್ಲಿ, ಪ್ರತಿಮಾದಿಗಳಲ್ಲಿ, ದೇವತೆಗಳಲ್ಲಿ–ಯಕ್ಷ–ಕಿಂಪುರಷರಲ್ಲಿ, ವೃಕ್ಷಗಳು– ಪರ್ವತ ಗಿರಿಗಳಲ್ಲಿ, ಮನಸ್ಸಿನಲ್ಲಿ ಜೀವ ರಾಶಿಗಳಲ್ಲಿ ಇವರು ಪರಮಾತ್ಮನ ವಿವಿಧ ರೂಪಗಳನ್ನು ಕಂಡು ಅವುಗಳಲ್ಲಿ ನಮ್ಮ ಸದ್ಯ ಚಿಂತನೆಗೆ ಬೇಕಾಗಿರುವ ಹಲವು ರೂಪಗಳನ್ನು ಇಲ್ಲಿ ಸೆರೆ ಹಿಡಿಯವಾಗಿದೆ ಭಗವಂತ ರೂಪಗಳನ್ನು ಚಿಂತೆನೆ ಬೇಕೆ ? ಹೌದು ಇದು ಎಲ್ಲರಿಗೆ ಅವಶ್ಯಕ ಅದರಲ್ಲೂ ಸಾಧಕರಿಗೆ ಬೇಕು ಬೇಕು. ಭಗವಂತನ ಅವತಾರಗಳು ಯಾವುದು? ಯಾವುದು ಆವೇಶ ಅವತಾರಗಳು? ಎಂಬುದರ ತಿಳಿದು ಅದು ಅನುಸಂಧಾನಕ್ಕೆ ಸಂಗತಿಯಾಗಬೇಕು ಯಾವ ರೂಪವನ್ನು ತಿಳಿದುಕೊಂಡರೆ ನಮ್ಮ ನೋವುಗಳು ಕಷ್ಟ ಕಾರ್ಪಣ್ಯಗಳು ಹೋಗುವುದು? ಇಂಥಹ ಪ್ರಶ್ನಗಳಿಗೆ ಉತ್ತರ ಇಲ್ಲಿದೆ
ಉದಾಹಾರಣೆಗೆ–
ಹಯಗ್ರೀವ ರೂಪ ಚಿಂತನಯಿಂದ ಜ್ಞಾನ ಪ್ರಾಪ್ತಿ.
ಹಂಸ ರೂಪ – ಯತಿಗಳಿಗೆ ವಿಶೇಷ
ಧನ್ವಂತರಿ ರೂಪ ಚಿಂತನೆಯಿಂದ ಆರೋಗ್ಯ ಪ್ರಾಪ್ತಿ.
ವೇದವ್ಯಾಸ ರೂಪ ಉಪಾಸನೆಯಿಂದ –ತತ್ವಶಾಸ್ತ್ರತಿಳಿವು.
ನರಸಿಂಹ ರೂಪ ಆರಾಧನೆಯಿಂದ– ಭಯನಿವಾರಣೆ, ಶತ್ರುನಾಶ ಇತ್ಯಾದಿ.

ಹೀಗೆ ಪ್ರತಿಯೊಂದು ಚಿಂತನೆಯಿಂದ ಅನಂತ ಫಲ. ಇಂತಹ ರೂಪಗಳಲ್ಲಿ ಪ್ರಮೇಯಗಳಲ್ಲಿ ಮಾತ್ರ ಉಳಿದು ಹೊಗೆದ್ದು. ಅಪ್ರಮೇಯನ ನೋಟ ಇಲ್ಲಿ ಕಾಣಸಿಗುತ್ತದೆ. ಈ ನೋಟ ಹರಿಯ ಮೈಮಾಟ ಭಗವದ್ಭಕರಿಗೆ ಪಂಚ ಭಕ್ಷದ ಊಟ. ಈರೀತಿಯ ಚಿಂತನೆಗಳು ಬಾಕೀ ಧರ್ಮಗಳಲ್ಲಿ ಕಾಣಸಿಗದು. ನಾನೇ ಪರಮಾತ್ಮ ನೆಂಬುವ ಮತಗಳಲ್ಲಿ ಇಂಥಹ ವೈವಿಧ್ಯ ಪೂರ್ಣತೆ ಭಗವಂತನ ಪರಿಪೂರ್ಣತ್ವ ಕಾಣಲು ಸಾಧ್ಯವಾಗುವುದಾದರೂ ಹೇಗೆ? ಸಿಂಧನೂರಿನ ಪ್ರಾತ್ಯವನ್ನು ಭತ್ತಣ ಕಣಜವೆಂದು ಕರೆಯಲಾಗುವುದು. ಸರಿಯಷ್ಟೆ ದಾಸರ ಇಂಥ ಕೃತಿಗಳಿಂದಾಗಿ ಆ ಊರಿನ ಆಧ್ಯಾತ್ಮ ಕಣಜ ಕೂಡ ಸಮೃದ್ಧಿಯಾಗಿದೆ. ಇದು 'ಅಜ್ಞಾನದ ಬರ' ಕ್ಕೂ ಸರಿ ಮೇಲಿನ ಲೋಕದ ಪ್ರವೇಶಕ್ಕು ಸರಿ ಇಂತಹ ಸರಿಗಳಲ್ಲಿ ಈ ನಾಲ್ಕು ಅಕ್ಷರದ 'ಹರಿ' ವಿಗೆ ಅವಕಾಶ ಮಾಡಿ ಕೊಟ್ಟ ಗುರುಗಳಿಗೆ ನಮನಗಳು ಕರಡಿ ಹಿಡಿದ ಜರಡಿಯಿಂದ ಬಂದ ಧಾನ್ಯವಿದು ಧನ್ಯರಾಗುವುದು ಮಾನ್ಯರಾಗುವುದು ಇದರಿಂದ ಸಾಧ್ಯವಿದೆ.

ಆಪ್ತಕಾರ್ಯದರ್ಶಿಗಳು
ರಾಜಾ ಎಸ್. ರಾಜಗೋಪಾಲಾಚಾರ್
ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ
ಮಂತ್ರಾಲಯ

तन्ती : बृन्दावन || श्रीमन्मूलरामो विजयते || दूरवाणी : ०८५१२-२७९४१६
**श्रीगुरुसार्वभौमसंस्कृतविद्यापीठम्, मन्त्रालय -५१८ ३४५.**
(श्रीराघवेन्द्रस्वामिमठ मन्त्रालय:)

**Sri Gurusarvabhouma Sanskrit Vidyapeetha**
**MANTRALAYAM - 518 345,** Kurnool Dist., A.P.

**ಸರ್ವೇವೇದಾಃ ಯತ್ಪದಮಾಮನಂತಿ ತಪಾಂಸಿ ಸರ್ವಾಣಿಚ ಯದ್ವದಂತಿ ಯಧಿಚ್ಛಂತ। ಬ್ರಹ್ಮಚರ್ಯ ಚರಂತಿ ತತ್ತೇಪದಂ ಸಂಗ್ರಹೇಣ ಬ್ರವೀಮಿ ಓಂ ಇತ್ಯಾತತ್ ॥**

ಎಂಬ ಕಾಠಕೋಪನಿಷತ್ತಿನ ಮಂತ್ರ ಅಭಿಪ್ರಾಯದಂತೆ ಅನಂತ ವೇದರಾಶಿಗಳು ಯಾವ ಭಗವಂತನನ್ನು ಪರಮ ಮುಖ್ಯ ವೃತ್ತಿಯಿಂದ ಕೊಂಡಾಡುತ್ತವೆಯೋ, ಜಗತ್ತಿನ ಎಲ್ಲ ತಪಸ್ಸುಗಳು ಕೂಡ ಭಗವಂತನ ಪ್ರಸನ್ನತೆಗಾಗಿ ನಡೆಯಲ್ಪಡುತ್ತವೆಯೋ, ಅಂತಹ ಭಗವಂತನ ಸರ್ವವಿದವಾದ ಮಹಿಮಾತಿಶಯವನ್ನು ಒಳಗೊಂಡ ಶಬ್ದವು ಎಂದಾದರೆ ಓಂಕಾರವು ಮಾತ್ರ ಅಂತಹ ಓಂಕಾರದಿಂದ ಜಗತ್ತಿನ ಭದವತ್ಪರವಾದ ಎಲ್ಲಾ ಗ್ರಂಥರಾಶಿಗಳು ಪ್ರಕಟವಾಗಿವೆ. ಅಂತಹ ಓಂಕಾರ ಪ್ರತಿಪಾದ್ಯನಾದ ಭಗವಂತನನ್ನೇ ನಾರಾಯಣಾಷ್ಟಾಕ್ಷರ, ವಾಸುದೇವ ದ್ವಾದಶಾಕ್ಷರ, ಗಾಯತ್ರೀ, ಪುರುಷಸೂಕ್ತ, ಸಮಸ್ತ ವೇದರಾಶಿಯಿಂದಲೂ ಕೂಡ ತಿಳಿಯಬಹುದಾಗಿದೆ. ಈ ಭಗವಂತನ ವ್ಯಾಪ್ತೋಪಾಸನೆಯ ಕ್ರಮವನ್ನ ಭಾಗವತದ ಎರಡನೇ ಸ್ಕಂದವೂ ಸುಂದರವಾಗಿ ಚಿತ್ರಿಸಿದೆ. ಇದೇ ಮಾತನ್ನ ಜಗನ್ನಾಥದಾಸರು ಕೂಡ ತಮ್ಮ ಹರಿಕಥಾಮೃತಸಾರದಲ್ಲಿ **"ಭೂಸಲಿಲಸಿಕಿಪವನದ ಭೂತಾಕಾಶದೊಳಗೈದೈದು ತನ್ಮಾತ್ರ ಸಹಿತ ಒಂದದಿಕ ಪಂಚಾಪಪದ್ವರ್ಣವೇದ್ಯಾ"** ಹೀಗೆ ಭಗವಂತನು 26 ವರ್ಣಗಳಿಂದ ಪ್ರತಿಪಾದಿತನಾಗಿ ಜೀವಶರೀರದಲ್ಲಿ ವ್ಯಾಪಿಸಿದ್ದು ಸುರಾಸುರರಿಗೆ ಅವರವರಿಗೆ ಯೋಗ್ಯವಾದ ಫಲಗಳನ್ನು ನೀಡಿ ಅನುಗ್ರಹಿಸುತ್ತಾನೆ. ಇತಹ ಭೂಮಿ, ಆಕಾಶ, ನೀರು, ಅಗ್ನಿ, ವಾಯು ಹಾಗೇ ಶಬ್ದಾದಿ ತನ್ಮಾತ್ರಗಳಿಂದ ವ್ಯಾಪಿಸಿಕೊಂಡಿರುವ ಭಗವಂತನ ವಿಶಿಷ್ಟರೂಪಗಳ ಚಿಂತನೆಯು ಮುಕ್ತಿಯೋಗ್ಯರಿಗೆ ಅತ್ಯಂತ ಅವಶ್ಯವಾದದ್ದು ಎಂಬುದಾಗಿ ತಿಳಿದು ಅಜಾದಿ ಭಗವದ್ರೂಪಗಳು ಮತ್ತು ಕೇಶವಾದಿ 24 ರೂಪಗಳು, ಮತ್ಸ್ಯಾದಿ ದಶಾವತಾರಗಳು, ನಾಲ್ಕು ವಾಸುದೇವಾದಿ ಭಗವದ್ರೂಪಗಳ ಲಕ್ಷಣ, ಚಿಂತನಾಕ್ರಮ, ಆ ಲಕ್ಷಣಕ್ಕೆ ಅನುಗುಣವಾದ ರೂಪಗಳ ಚಿತ್ರಣ,

ಮುಂತಾದವುಗಳನ್ನು ಏಕತ್ರ ಸಂಗ್ರಹಿಸಿ ಸಾಧಕರ ಸಾಧನೆಗೆ ಸಹಾಯವನ್ನು ಒದಗಿಸುವುದರ ಮೂಲಕ ಅನೇಕ ಹರಿದಾಸರುಗಳ ಸುಳಾದಿ, ಉಗಾಭೋಗಗಳನ್ನು ಕೂಡ ಪ್ರಸಂಗೋಚಿತವಾಗಿ ನೀಡಿ **'ಅಜಾದಿ ಭಗವದ್ರೂಪಗಳ ವಿರಾಟ್‌ರೂಪ ದರ್ಪಣ'** ಎಂಬ ಶೀರ್ಷಿಕೆಯಲ್ಲಿ ಕಿರು ಹೊತ್ತಿಗೆಯನ್ನು ಹೊರತರುತ್ತಿರುವ ಕರಡಿಗುಡ್ಡದ ಮುಖ್ಯ ಪ್ರಾಣರ ಉಪಾಸಕರಾದ ಶ್ರೀ ಬಾಲಗೋಪಾಲದಾಸರು ನಿಜವಾಗಲೂ ಅಭಿನಂದನೀಯರು. ಇವರ ಪರಿಶ್ರಮದ ಫಲವೆಂಬಂತೆ ಈ ಪುಸ್ತಕದ ಉದಯವೂ ಸಾಧಕರರನ್ನೆಲ್ಲಾ ಮುಖ್ಯವಾಹಿನಿಗೆ ತರುವ ವ್ಯವಸ್ಥೆ ಆದರೆ ಸಾಕು. ಕಾರಣ ಪ್ರತಿಯೊಬ್ಬ ಶ್ರೀಹರಿಯ ಭಕ್ತರು ಇದನ್ನು ಕೊಂಡು ಅಧ್ಯಯನ ಮಾಡಿ ಆ ಭಗವದ್ರೂಪಗಳ ಚಿಂತನೆಯ ಮೂಲಕ ಭಗವದನುಗ್ರಹಕ್ಕೆ ಪಾತ್ರರಾಗಲೆಂದು ಹಾರೈಸುತ್ತಾ ಶ್ರೀ ಬಾಲಗೋಪಾಲದಾಸರಿಗೆ ಇನ್ನೂ ಇಂತಹ ಹತ್ತು ಹಲವು ಪುಸ್ತಕಗಳನ್ನು ಪ್ರಕಾಶಿಸುವ ಸಾಮರ್ಥ್ಯವನ್ನು ನೀಡಲೆಂದು ಭಗವಂತನನ್ನು ಪ್ರಾಥಿಸುತ್ತೇವೆ.

**ಡಾ. ಎನ್. ವಾದಿರಾಜಾಚಾರ್ಯ**
ಪ್ರಾಚಾರ್ಯರು,
ಶ್ರೀ ಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ,
ಮಂತ್ರಾಲಯ.

Sree Raghavendra Swamy Mutt,

## ॥ ಶ್ರೀ ವಿಜಯ ವಿಠ್ಠಲ ಪ್ರಸೀದತು ॥

# ॥ ಮುನ್ನುಡಿ ॥

**"ಬಹು ಚಿತ್ರ ಜಗತ್ ಬಹುದಾಕರಣಂ"** ಎಂದಿರುವಂತೆ ಪರಮಾತ್ಮನ ಸೃಷ್ಟಿ ಕಾರ್ಯ ಅದ್ಭುತವು ವಿಚಿತ್ರವೂ ಆಗಿದೆ. ಅಶೃಜ್ಞಾನಾವಸ್ಥೆಯಲ್ಲಿರುವ ಜೀವರನ್ನು ಅವರವರ ಗತಿ, ಸದ್ಗತಿ ನೀಡಲು ಸೃಷ್ಟಿಗೆ ತಂದು ಅವರಿಂದ ಮಾಡಿಸುವ ವ್ಯಾಪಾರವೂ ಅಪಾರ. ಹೀಗೆ ಸೃಷ್ಟಿಗೆ ಬಂದ ಜೀವರಿಗೆ ಮನುಷ್ಯ ಜನುಮ ಬರುವದು ದುರ್ಲಭ. ಆದ್ದರಿಂದ ಮಾನವ ಜನ್ಮ ದೊಡ್ಡದು, ಅದನ್ನ ಹಾಳು ಮಾಡಿಕೊಳ್ಳಬೇಡಿರೋ ಹುಚ್ಚಪ್ಪಗಳಿರಾ॥ ಎಂದು ಶ್ರೀ ಪುರಂದರದಾಸರು ನಮ್ಮನ್ನು ಎಚ್ಚರಿಸಿದ್ದಾರೆ. ಈ ಪ್ರಪಂಚ, ಈ ಸಂಸಾರ ಸಾಗರ ದಾಟುವ ಕಡೆ ಜನುಮವೇ ಮಾನವ ಜನ್ಮ. ಈ ಜನುಮ ಬಂದಾಗ ರಾಮನಾಮ ಸ್ಮರಣೆ, ಶ್ರವಣ, ಧ್ಯಾನ, ನಿಧಿ ಧ್ಯಾಸನ ಮಾಡಿ ಮುಕ್ತಿ ಸಾಧನ ಮಾಡಿಕೊಳ್ಳುವ ಜನ್ಮವೇ ಮಾನವ ಜನ್ಮ.

ಆನಪ ಮೆಚ್ಚಿದರೀವ ಧನ, ವಾ। ಹನ, ವಿಭೂಷಣ, ವಸನ ಭೂಮಿಯ । ತನು ಮನಗಳಿತ್ತಾದರಿಪ ರುಂಟೆನೋ ಲೋಕದೊಳು ॥
ಅನವರತ ನೆನೆವರನಂತಾ । ಸನವೆ ಮೊದಲಾದಲುದೊಳಿ ।
ಷಣ್ಮಗನಂದಲವರ ವಶನಾಗುವ ಮಹಾಮಹಿಮಾ ॥(13 ಕರುಣಾಸಂಧಿ) ಹ.ಕ.ಅ.ಸಾ.
ಸಾಧನ ಶರೀರವಿದು ನೀ ದಯದಿ ಕೊಟ್ಟದ್ದು ಸಾಧಾರಣವಲ್ಲ
ಸಾಧು ಬಂಧೋ । ಎಂದಾಗ, ಈ ಜೀವಕ್ಕೆ ಪರಮಾತ್ಮನು ಮಾಡಿದ ಉಪಕಾರ, ಕಾರುಣ್ಯ

ಘನವಾದುದು ಶ್ರೀ ಹರಿಯ ಕಾರುಣ್ಯ ನೆನೆ-ನೆನೆದು, ಕೃತಜ್ಞತೆಯಿಂದ ವಂದಿಸಲೆಂದೇ ಈ ಜನುಮ.

ನಾವು ಆಚರಿಸುವ ಧರ್ಮ ಕಾರ್ಯಗಳಲ್ಲಿ ಜಪ, ತಪ, ದಾನ ದೇವತಾರ್ಚನೆಯಂತೆ, ದಿನ ದಿನದಿ ಮಾಡುವ ಸಂಧ್ಯಾವಂದನೆಯೂ ಬಹು ಮುಖ್ಯವಾದ ಶ್ರೀ ಹರಿಯ ಉಪಾಸನೆ.

ಶ್ರೀ ಹರಿಯು ಬ್ರಹ್ಮಾಂಡ - ಒಳ ಹೊರಗೂ ವ್ಯಾಪ್ತನಾಗಿರುವಂತೆ ಈ ಪಿಂಡಾಂಡದ (ದೇಹದ) ಒಳ ಹೊರಗೂ ಪರಿಪೂರ್ಣನಾಗಿ ವ್ಯಾಪಿಸಿದ್ದಾನೆ.

॥ ಬೊಮ್ಮಾಂಡದೊಳಗಿದ್ದ ಸ್ಥೂಲವಾದ ವಸ್ತುಗಳು ।
। ನಿಮ್ಮವಾಗಿ ದೇಹದಲ್ಲಿ ಸೂಕ್ಷ್ಮವಾಗಿ ಉಂಟು ಕೇಳೋ । ಎಂದು ಶ್ರೀ ಶೇಷದಾಸರು ವಿವರಿಸುತ್ತ–

॥ ಸಕಲ ಸಾಧನ ಮಧ್ಯ ಉತ್ಕೃಷ್ಟವೆನಿಪುದು । ನಿಖ ಸಿಖ ಪರಿಪೂರ್ಣ ಗುರು ವಿಜಯವಿಠ್ಠಲ ವೊಲಿವಾ ಎಂದು ತಿಳಿಸಿದ್ದಾರೆ.

ನಮ್ಮಿಂದ ಸಾಧನ ಮಾಡಿಸಲು ಶ್ರೀಹರಿಯು ಜೀವರಿಗೆ ಶರೀರ ಕೊಟ್ಟು ಮತ್ತು ನಮ್ಮ ದೇಹದ ಅಂಗಾಂಗಗಳಲ್ಲಿ ತತ್ತ್ವೇಶ್ವರ ನೆಮಿಸಿ ಮತ್ತು ಅವರಲ್ಲಿ ತಾನೇ ನಿಂತು ಸಕಲ ವ್ಯಾಪಾರಗಳನ್ನು ಮಾಡಿಸುತ್ತಾನೆ. ಹೀಗಿರುವಾಗ ನಮ್ಮ ದೇಹದ ಸ್ಥಾನಗಳಲ್ಲಿರುವ ಆ ರಂಗನ ರಥ, ನಾಮಸ್ಮರಣೆ ಮಾಡುವದು ನಮ್ಮ ಕರ್ತವ್ಯ.

॥ ತೇಷಾಂನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ಎಂದಾಗ ನಮ್ಮ ಯೋಗಕ್ಷೇಮದ ಹೊಣೆ ಹೊತ್ತ ಶ್ರೀಹರಿಯನ್ನು (ಅ.9 22) ನೆನೆಯಬೇಡವೇ । ಮನವನಿತ್ತರೇ ತನ್ನನೀವನು ಎಂದು ಜಗನ್ನಾಥದಾಸರು ಸಾರಿ ಸಾರಿ ಹೇಳಿದ್ದಾರೆ.

ಪಂಚಭೂತಗಳಲ್ಲಿ, ಪಂಚ ತನ್ಮಾತ್ರಗಳಲ್ಲಿ, ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯಗಳಲ್ಲಿ ಮತ್ತರ ಮನ, ಚೇತನ, ಚಿತ್ತ ಬುದ್ಧಿಯಲ್ಲಿರುವ ಪರಮಾತ್ಮನನ್ನು ಸ್ಮರಿಸುತ್ತ ವಂದಿಸುವದೇ ತತ್ವಾನ್ಯಾಸ ಹಾಗೂ ಮಾತೃಕಾನ್ಯಾಸ.

ಹ.ಕ.ಅ.ಸಾ ಖು 11. ಪಾದಮಾನಿ ಜಯಂತ ನೊಳಗೆ ಸು । ಮೇಧನಾಮಕನಿಪ್ಪ ದಕ್ಷಿಣ। ಪಾದನಂಗುಟದಲ್ಲಿ ಪವನನು ಭಾರಭೃದ್ರೂಪ ॥ ಕಾದುಕೊಂಡಿಹ ಟಂಕಿತರ ಮೊದ । ಲಾದ ನಾಮದಿ ಸಂಧಿಗಳಲೀರ್ಯೆದು ರೂಪ ದಲ್ಲಿಪ್ಪ ಸಂತತ ನಡೆದು ನಡೆಸುತಲಿ ॥1॥

॥ ಕಪಿಲ ಚಾರ್ವಾಂಗದಿ  ರೂಪದಿ । ವಪುಗಳೊಳು ಹಸ್ತಗಳ ಸಂಧಿಯೊಳ ಪರಿಮಿತ ಕರ್ಮಗಳ ಮಾಡುತಲಿಪ್ಪ ದಿನದಿನದಿ ॥ ಕೃಪಣ ವತ್ಸಲ ಪಾರ್ಶ್ವದೊಳಪರ । ಸಫಲಿ ಎನಿಸುವ ಗುದ ಉಪಸ್ಥದಿ । ವಿಪುಳ ಬಲಿ ಭಾಗ ಮನವೆನಿಸಿ ತುಂದಿಯೊಳಗಿರುತಿಹನು (ಮಾತೃಕಾಸಂಧಿ)

ಹೀಗಿರುವ ಶ್ರೀ ಹರಿಯ ಸ್ಮರಣೆ ಮಾನವ ಜನ್ಮ ಬಂದಾಗಲೇ ಸಾಧ್ಯ.
ಜತೆ :– ಅಕ್ಷರಾಕ್ಷರದಿಂದ ಭಗವನ್ನಾಮವ ಚಿಂತಿಸು ।
ಅಕ್ಷರಕ್ಷರ ಪುರುಷ ವಿಜಯವಿಠ್ಠಲ ಸುಳಿವ ॥ (ವಿಜಯದಾಸರ ಸುಳಾದಿ)

ಎಂದಂತೆ ಅ – ಅಜಾಯ ನಮಃ, ಆ– ಆನಂದಾಯ ನಮಃ, ಇ–ಇಂದ್ರಾಯ ನಮಃ, ಈ–ಈಶಾಯ ನಮಃ, ಹೀಗೆ ವರುಣ ನಾಮಕ ವರುಣ ಬಿಂಬ ಮೂರ್ತಿಯನ್ನು ತನ್ನಾಮ. ತನ್ನಾಮ ರೂಪವನ್ನು ಚಿಂತಿಸುವ ಭಕುತರನು –

॥ ಶ್ರೀ ವಲ್ಲಭ ನಮ್ಮ ವಿಜಯವಿಠ್ಠಲೇಯ । ಕಾವುತಲಿಪ್ಪನು ಈ ಪರಿ ತಿಳಿದವನೆ ॥
ಎಂದೆನ್ನಲಾಗಿದೆ.

ಹ. ಕ.ಅ.ಸಾ. । ಏಕಪಂಚಾದಶದ್ವರಣಗತ ।
। ಮಾಕಳತ್ರನು ಸರ್ವರೊಳಗ
। ವ್ಯಾಕೃತಾಕಾಶಾಂತ ವ್ಯಾಪಿನಿಸಿನಿಗಮ ತತಿಗಳನು ॥
। ವ್ಯಾಕರಣ ಭಾರತ ಮುಖಾದ್ಯಾ ।
। ನೇಕ ಶಾಸ್ತ್ರ ಪುರಾಣ – ಭಾಷ್ಯಾ
। ನೀಕಗಳ ಕಲ್ಪಿಸಿ ಮನೋ ವಾಙ್ಮಯನೆನೆಸಿಕೊಂಬ.

ಹೀಗೆ ಅಕ್ಷರಕ್ಷರಗಳಲ್ಲಿರುವ ಪರಮಾತ್ಮನ ಸ್ಮರಣೆ, ತ್ರಿಕಾಲ ಸಂಧ್ಯಾಗಳಲ್ಲಿ ಆಗುತ್ತದೆ.

ಪ್ರಸ್ತುತ ನಾಮಗಳೆಲ್ಲವೂ ಶಬ್ದ ಮಾಧ್ಯಮ ಶ್ರವಣ ಶಕ್ತಿಯಿಂದ ತಿಳಿದುಕೊಳ್ಳುತ್ತೇವೆ. ಅದು ಸ್ಥಿರವಾಗಬೇಕಾದರೆ ಮನನ ಅಗತ್ಯ. ಶಬ್ದ ಮಾಧ್ಯಮ ಜೊತೆಗೆ ದೃಷ್ಯ ಮಾಧ್ಯಮದ ಸಹಾಯವಿದ್ದರೆ ಆ ನಾಮಗಳ ರೂಪಗಳನ್ನು ಕಣ್ತುಂಬಾ ನೋಡಿದಾಗ ಆ ಭಗವದ್ರೂಪ ಅಚ್ಚಳಿಯದೇ ನಮ್ಮ ಚಿತ್ತದಲ್ಲಿ ಒತ್ತಿ ಮಾಡುತ್ತದೆ. ಆಗ ನಾಮದ ಜೊತೆಗೆ ರೂಪವನ್ನು ಕಂಡು ಸಂತೋಷಿಸಲು ಸಾಧ್ಯ.

ಹೀಗೆ ಇಲ್ಲಿ ಎರಡು ಮಾಧ್ಯಮಗಳನ್ನು ಏಕತ್ರಗೊಳಿಸಿರುವದು ಬಹು ಅಪರೂಪದಿ ಕೃತಿಯಾಗಿದೆ. ಈ ಕೃತಿ ಆಕೃತಿಗಳೊಂದಿಗೆ,

॥ ಆ ಪಾದ ಮೌಳಿ ಪರಿಯಂತಂ ಗೂರೂಣಾಂ ಆಕೃತಿ ಸ್ಮರೇತ್ ।
। ತೇನ್ ವಿಘ್ನಂ ಃ ಪ್ರಣಶ್ಯಂತಿ ಸಿದ್ಧಾಂತಿಚ ಮನೋರಥಃ ॥
ಎಂದಂತೆ ಭಕುತರ ಕೈಯ್ಯಗೆ ಲಭ್ಯವಾಗುತ್ತಿರುವದು ಸಾಧಕರಿಗೆ ಬಹು ಪ್ರಯೋಜನಾಕಾರಿಯಾಗಿದೆ.

(24) ತತ್ವಗಳ ಭಗವದ್ರೂಪಗಳು ಕೇಶವ ಆದಿ ನಾಮಗಳಿಂದ ಶ್ರೀ ಕೃಷ್ಣನವರೆಗೆ ಇಲ್ಲಿ ದೃಶ್ಯ ರೂಪಗಳನ್ನು ಸಂಗ್ರಹಿಸಲಾಗಿದೆ. ಇದರಂತೆ (51) ಏಕ ಪಂಚಾಶದ್ವರಣ ಗತ

ಸದಾ ಸೇವಾ ನಿರತರಾದ ಇವರು ಗೋಪಾಲರಾವ ಇವರ ಹೆಸರಿಗೆ ಬದಲಾಗಿ ಗೋಪಾಲದಾಸ ರೆಂದು ಗುರುತಿಸುವಂತೆ ಸಾಧನೆಯಾಗಿದೆ. ಇನ್ನೂ ಉತ್ತಮ ಸೇವೆಗಾಗಿ ಉತ್ತಮ ಆರೋಗ್ಯ, ಭಕ್ತಿ ಸಂಪತ್ತನ್ನು ಶ್ರೀ ಹರಿವಾಯುಗಳು ಕರುಣಿಸಲೆಂದು ಪ್ರಾರ್ಥಿಸುವೆ.

ನಡೆಯುವವನು ಎಡವುವದು ಸಹಜ. ಇದರಂತೆ ನನ್ನಿಂದ ಇಲ್ಲಿ ಆದ ತಪ್ಪುಗಳನ್ನು ಹರಿಸಕ್ಷೀರ ನ್ಯಾಯದಂತೆ ಅವಲೋಕಿಸಿ ಕ್ಷಮಿಸಬೇಕಾಗಿ ಭಕ್ತರಲ್ಲಿ ವಿನಂತಿ.

ಈ ಉತ್ತಮ ಕೃತಿಗೆ ಮುನ್ನುಡಿಯಾಗಿ ನುಡಿಸಿದ-ಬರೆಯಿಸಿದ ಶ್ರೀ ಗೋಪಾಲದಾಸ ಕನಕಗಿರಿ ಇವರ ಪ್ರೀತಿ, ವಿಶ್ವಾಸಕ್ಕೆ ನನ್ನ ಕೃತಜ್ಞತಾ ನಮನಗಳು ಇವರಿಗೆ ಸಹಕರಿಸಿದ ಎಲ್ಲಾ ಮಿತ್ರರಿಗೆ ರಾಜಾ ಎಸ್. ಗೋಪಾಲಾಚಾರ್ಯರಿಗೆ, ಶ್ರೀ ಎಸ್. ಆರ್. ಕಟ್ಟಿಯವರಿಗೆ ವಂದನೆಗಳು.

ಶ್ರೀ ಮದ್ವೇಷಾರ್ಪಣಮಸ್ತು.

31-03-2013

ಗುರುಚರಣ ಧೂಳೀ
ಕಿಶನರಾವ ಜಾಲಿಹಾಳ
ರಾಯಚೂರು

# ಪ್ರಕಾಶಕರ ನುಡಿ

ಹರಿಯ ಪಂಚಾಶದ್ವರಣ ಸು-। ಸ್ವರವುದಾತ್ತನುದಾತ್ತ ಪ್ರಚಯ ।
ಸ್ವರಿತ ಸಂಧಿ ವಿಸರ್ಗ ಬಿಂದುಗಳೊಳಗೆ ತದ್ವಾಚ್ಯ॥
ಇರುವ ತತ್ತನ್ನಾಮ ರೂಪಗಳ-। ರಿತುಪಾಸನೆಗೈವರಿಳೆಯೊಳು।
ಸುರರೆ ಸರಿ ನರರಲ್ಲ ಅವರಾಡುವದೇ ವೇದಾರ್ಥ॥

ಶ್ರೀ ಹರಿಕಥಾಮೃತಸಾರ

ಉದಯ ಕಾಲದಿಂದ ಸಾಯಾದಿತನಕ ಭಗದ್ವಿಷಯ ಸಾಧನವನ್ನು ಅಧಿಕಾರಿಯಾದವನು ಮಾಡಬೇಕು ಅಂತ ಶ್ರೀ ಶೇಷದಾಸರು ತಮ್ಮ ನಿತ್ಯಕರ್ಮಾನುಷ್ಠಾನ ಎಂಬ ಗದ್ಯ ಗ್ರಂಥದಲ್ಲಿ ತಿಳಿಸಿದ್ದಾರೆ. ಸ್ನಾನ, ಸಂಧ್ಯಾವಂದನೆ ಜಪ ತಪಾನುಷ್ಠಾನಗಳನ್ನು ಯೋಗ್ಯತಾನುಸಾರವಾಗಿ ಮಾಡಬೇಕು. ಜಪ ಹೇಗೆ ಮಾಡಬೇಕು ಅಂದರೆ ದಾಸರಾಯರು ತಿಳಿಸುತ್ತಾರೆ ಅಷ್ಟದಳದ ಕಮಲ 51 ಕೇಸರವುಳ್ಳದ್ದು. ಒಂದೊಂದು ಕೇಸರದಲ್ಲಿ ಅಕ್ಷರ ಪ್ರತಿಪಾದ್ಯನಾದ ಅಜಾದಿ 51 ಭಗವದ್ರೂಪಗಳುಂಟು. ಹಾಗೇನೇ ಅಮುಖ್ಯಾಭಿಮಾನಿ ದೇವತೆಗಳುಂಟು. ಹೀಗೆ ತಿಳಿದು 51 ಮೂರ್ತಿಗಳಲ್ಲಿ ಸೂರ್ಯಾಂತರ್ಯಾಮಿಯಾದ ನಾರಾಯಣನನು ಐಕ್ಯ ಚಿಂತನೆ ಮಾಡಿ ಸ್ವಗುರು ಪರಮಗುರು ಅಂತರ್ಯಾಮಿಯಾದ ಪರಮಾತ್ಮನನ್ನು ಐಕ್ಯ ಚಿಂತನೆ ಮಾಡಿ ನುಡಿಯಲ್ಪಟ್ಟ ಅಕ್ಷರ ನಿಯಾಮಕ ಐಕ್ಯ ಚಿಂತನೆ ಮಾಡೋಣವೇ ಜಪ ಅಂತ ಕರೆಸುತ್ತದೆ ಅಂತ ಶ್ರೀ ಶೇಷದಾಸರು ತಿಳಿಸಿದ್ದಾರೆ.

ಅ ಮೊದಲು ಕ್ಷಕಾರಾಂತ ನಾಮಗಳು ಸ್ವಾಮಿಯಾದ ವಿಷ್ಣುವಿನ ನಾಮಗಳೆಂದು ತಿಳಿವುದೇ ಆನಂದ ಪರಮಾನಂದ ಅಂತ ಶ್ರೀ ವಿಜಯದಾಸರು ಸ್ತುತಿಸಿದ್ದಾರೆ. ಜ್ಞಾನಿಗಳು ಆಡುವ ಮಾತುಗಳೆಲ್ಲ ಮಂತ್ರಗಳೇ. ಇದನ್ನು ಶ್ರೀ ವರದಗೋಪಾಲದಾಸರು ತಮ್ಮ ಗುರುಗಳಾದ ಶ್ರೀ ಭಾಗಣ್ಣ ದಾಸರನ್ನು ಮಾತೆ ಮಂತ್ರಗಳಾದವೆ ಗುರುವೆ ನಿಮ್ಮ ಮಾತೇ ಮಂತ್ರಗಳಾದವೆ ಅಂತ ಕೊಡಾಡಿದ್ದಾರೆ. ಶ್ರೀ ಜಗನ್ನಾಥದಾಸರು ತಮ್ಮ ಮೇರು ಗ್ರಂಥ ಶ್ರೀ ಹರಿಕಥಾಮೃತಸಾರ ರಚನೆ ಮಾಡುವಾಗ ಅಕ್ಷರಾಭಿಮಾನಿ ದೇವತೆಗಳು ನಾ ಮುಂದು ತಾ ಮುಂದು ಎಂದು ಕೇಳುತ್ತಿದ್ದರೆಂದು ಬಲ್ಲವರಿಂದ ಕೇಳಿದ್ದೇವೆ. ಅನಂತ ಕಲ್ಯಾಣಗುಣಪರಿಪೂರ್ಣನಾದ ದೋಷವರ್ಜಿತನಾದ

ಜಗದೇಕನಾಥನು, ಜಗದ್ವಂದ್ಯನು, ಜಗದಿಂದ ಭಿನ್ನನು, ಜಗದಾಧಾರಕನು ಆದ ಶ್ರೀ ಹರಿಯು ಅನಂತಾನಂತ ರೂಪಗಳನ್ನು ಧರಿಸಿದರೂ, ಅವನ ಎಲ್ಲ ರೂಪಗಳಲ್ಲಿ ಅಭೇಧವನ್ನು ತಿಳಿಯುವದೆಂದು ಶೃತಿ ಸ್ಮೃತಿ ಪುರಾಣಾದಿಗಳು ಸಾರಿವೆ. ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳಲ್ಲಿ ತನ್ನಾಮ ತದ್ರೂಪ ತದಾಕಾರ ರೂಪವ ಧರಿಸಿ ಬಿಂಬನೆನಿಸಿದರೂ, ಅವುಗಳಿಂದ ಭಿನ್ನನಾಗಿದ್ದಾನೆ. ಇದಲ್ಲದೆ ಸಮಸ್ತ ಸ್ಥಾವರ, ಜಂಗಮ, ಜಡವಸ್ತುಗಳಲ್ಲಿ ವ್ಯಾಪ್ತನಾಗಿದ್ದಾನೆ. ಕಲ್ಲಿನಲ್ಲಿ ಕಠಿಣತ್ವವನ್ನು, ಹೂವಿನಲ್ಲಿ ಮೃದುತ್ವವನ್ನು, ರಸದಲ್ಲಿ ರಸತ್ವವನ್ನು ಅವುಗಳಲ್ಲಿ ವ್ಯಾಪ್ತನಾಗಿ ವ್ಯಕ್ತಪಡಿಸುವವನು ಅವುಗಳಿಂದ ಭಿನ್ನನಾದ ಭಗವಂತನೇ. ಇಂಥಹ ಮಹಾಮಹಿಮೋಪೇತನಾದ ಭಗವಂತನ ಅನಂತ ರೂಪಗಳನ್ನು ಈಶಕೋಟಿಪ್ರವಿಷ್ಟಳಾದ ಜಗನ್ಮಾತೆಯಾದ ಲಕ್ಷ್ಮಿದೇವಿಗೂ ಕೂಡ ಅರಿಯಲು ಅಸಾಧ್ಯ. ಭಗವಂತನ ಮಹಾತ್ಮ್ಯ ಜ್ಞಾನವನ್ನು ಅರಿಯುವಲ್ಲಿ ತಾರತಮ್ಯ ಉಂಟು. ಜಗನ್ಮಾತೆಯಾದ ಲಕ್ಷ್ಮಿ ದೇವಿ ಅರಿತಷ್ಟು ಬ್ರಹ್ಮ ವಾಯು ಹಾಗೂ ತ್ವತ್ಪತ್ನಿಯರು ಅರಿಯಲಾರರು. ಇವರಿಗಿಂತ ಗರುಢ ಶೇಷ ರುದ್ರಾದಿಗಳು ಕಡಿಮೆ ಅರಿತವರು ಮತ್ತು ಇದರಂತೆ ತಾರತಮ್ಯವಾಗಿ ಉತ್ತಮರು ಅಧಮರಿಗಿಂತ ಹೆಚ್ಚಿಗೆ ಅರಿತವರು. ಅಂತು ಭಗವಂತನ ಪ್ರಸಾದವಾಗಬೇಕಾದರೆ ಅವನ ಮಾಹಾತ್ಮ್ಯ ಜ್ಞಾನವನ್ನು ಯಥೋಚಿತವಾಗಿ ತಿಳಿವುದವಶ್ಯಕ.

ತಿಳಿಸಿಕೊಂಬುವ ನೀನೆ ಶೃತಿ ಸ್ಮೃತಿ ಗಳೊಳಗಿದ್ದು<br>
ತಿಳಿಸುವವನು ನೀನೇ ಉಪದೇಶಕರೊಳಿದ್ದು<br>
ತಿಳಿಯುವವನುನೀನೇ ಬುದ್ಧ್ಯಾದಿಂದ್ರಿಯಗಳೊಳಗಿದ್ದು<br>
ನೆಲೆಗೊಂಡು ನಿಖಿಳ ವ್ಯಾಪಾರ ಮಾಡುತಲಿಪ್ಪೆ

ಎಂಬ ಶ್ರೀ ಮದ್ ಹರಿಕಥಾಮೃಸಾರ ಕರ್ತೃಗಳಾದ ಶ್ರೀ ಜಗನ್ನಾಥದಾಸರ ಉಕ್ತಿಯಂತೆ ಭಗವಂತನ ಮಹಾತ್ಮ್ಯ ಜ್ಞಾನವು ಅವನ ಅಂತಕರುಣದಿಂದಲೇ ಗುರುಮುಖೇನ ಆಗಬೇಕು.

ಭಗವಂತನ ಅಚಿಂತ್ಯಾದ್ಭುತ ಶಕ್ತಿಗಳಲ್ಲಿ ಸೃಷ್ಟ್ಯಾದಿ ವ್ಯಾಪಾರವು ಒಂದು. ಓಂಕಾರವಾಚ್ಯನಾದ ಭಗವಂತನು ಪ್ರಣವಪ್ರತಿಪಾದ್ಯನು. ಪ್ರಣವಾಕಾರದಿಂದಲೇ ಸಕಲ ಅಜಾದಿ 51 ಅಕ್ಷರಗಳ ಉತ್ಪತ್ತಿ. ಇವುಗಳಿಂದ ತಾರಾಕ್ಷರ ಮಂತ್ರ, ಇವುಗಳಿಂದ ವ್ಯಾಹೃತಿಗಳು, ವ್ಯಾಹೃತಿಗಳಿಂದ ಗಾಯತ್ರಿ ಮಂತ್ರವು, ಅದರಿಂದ ಪುರುಷಸೂಕ್ತ ಉತ್ಪತ್ತಿ. ತಜ್ಜನಿತವಾದವುಗಳು ವೇದ ಸಮೂಹಗಳು, ಶತ ಕೋಟಿ ರಾಮಾಯಣ, ಇತ್ಯಾದಿ. ಇದು ಅತಿ ಸ್ಥೂಲವಾದ

ಪರಿಚಯ. ಇದನ್ನು ಸಮಗ್ರವಾಗಿ ಶ್ರೀ ವರದೇಂದ್ರ ತೀರ್ಥರಿಂದ ತಂತ್ರಸಾರೋಕ್ತ ಆಧಾರಿತ ರಚಿತವಾದ ಪದ, ಶ್ರೀ ವ್ಯಾಸತತ್ವಜ್ಞರಿಂದ ರಚಿತವಾದ ಗಾಯತ್ರಿ ಉತ್ಪತ್ತಿ ವಿವರ, ಶ್ರೀ ವಿಜಯರಾಯರಿಂದ ರಚಿತವಾದ ಗಾಯತ್ರಿ ಉತ್ಪತ್ತಿ, ವರ್ಣಗಳ ಉತ್ಪತ್ತಿ, 51 ಅಕ್ಷರಗಳ ಉತ್ಪತ್ತಿ ಅವುಗಳಲ್ಲಿರುವ ಭಗವದ್ರೂಪಗಳ ಚಿಂತನೆ ಸುಳಾದಿ ಆಧರಿಸಿ ದಾಸಸಾಹಿತ್ಯದಲ್ಲಿ ವಿಶೇಷ ಸೇವೆ ಮಾಡಿ ಮುಮುಕ್ಷುಗಳಿಗೆ ಸಾಧನ ಮಾರ್ಗ ತೋರಿಸಿದಂಥ ಪೂಜ್ಯ ಶ್ರೀ ಗುರುಮಧ್ವರಾವ್ ಉಪ್ಪಲಿ ತಾತಾ ಅವರು ರಚಿಸಿರುವ ಸಚಿತ್ರರೂಪಕವಾದ ಓಂಕಾರ ಗಾಯತ್ರಿ ವೈಭವ ಗ್ರಂಥವು ವಿಶೇಷವಾಗಿ ವಿಸ್ತರಿಸಿದೆ. ಈ ಗ್ರಂಥವು ಶ್ರೀ ಮಂತ್ರಾಲಯ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದಿಂದ ಪ್ರಕಾಶನವಾಗಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಅವರಿಂದ ಪ್ರಾರಂಭವಾಗಿ ಪೂಜ್ಯ ಕಾಶಿ ಹನುಮದ್ದಾಸರ ಆಧ್ವರ್ಯದಲ್ಲಿ ಪ್ರತಿವರ್ಷ ಶ್ರೀ ಶೇಷದಾಸರ ಆರಾಧನೆಯನ್ನು ಉಭಯರ ಸಮ್ಮುಖದಲ್ಲಿ ಹಲವಾರು ಕಡೆ ನಡೆಸಲಾಗಿದೆ. ಅವರ ಕೃಪಾಬಲದಿಂದ ಈ ಸಲ ಶ್ರೀ ಶೇಷದಾಸರ ಆರಾಧನೆಯನ್ನು ಶ್ರೀ ವರದೇಂದ್ರ ತೀರ್ಥರ/ಶ್ರೀ ಪ್ರಾಣೇಶ ದಾಸರಾದಿಗಳ ಸನ್ನಿಧಾನ ಕಸಬಾ/ಲಿಂಗಸುಗೂರು ಇಲ್ಲಿ ನಡೆಯಲಿದೆ. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಗುರುಮಧ್ವರಾವ್ ಉಪ್ಪಲಿ ಕೃಪಾಪೋಷಿತ ಶ್ರೀ ಶೇಷದಾಸರ ಆರಾಧನಾ ಸೇವಾ ಸಂಘದ ವತಿಯಿಂದ, ಕರಡಿಗುಡ್ಡದ ಶ್ರೀ ಮುಖ್ಯಪ್ರಾಣ ದೇವರನ್ನು ವಿಶೇಷ ಸೇವೆಯಿಂದ ಒಲಿಸಿಕೊಂಡು, ಪ್ರಾಕೃತ ಭಾಷೆಯ ಸುಧಾ ಎಂದು ಖ್ಯಾತಿ ಪಡೆದ ಶ್ರೀ ಹರಿಕಥಾಮೃತಸಾರದ ಫಲಸ್ತುತಿಯಲ್ಲಿ ಶ್ರೀ ಶ್ರೀದ ವಿಠ್ಠಲರು ತಿಳಿಸಿದ ಸಕಲ ಲೌಕಿಕ/ ಪಾರಮಾರ್ಥಿಕ ಇಷ್ಟಾರ್ಥಗಳನ್ನು ಶ್ರೀ ಮದ್ ಹರಿಕಥಾಮೃಸಾರ ಗ್ರಂಥದ ಪಾರಾಯಣದಿಂದ ಪಡೆದುಕೊಳ್ಳುವದು ಸಾಧ್ಯವೆಂದು ವಿಶ್ವಾಸ ಮಾಡುವವರಿಗೆ ತೋರಿಕೊಡುತ್ತಿರುವವರು ಶ್ರೀ ಗುರುಮಧ್ವರಾವ್ ಉಪ್ಪಲಿ ಇವರ ಶಿಷ್ಯರಾದ ಶ್ರೀ ಬಾಲಗೋಪಾಲದಾಸರು. ಇವರ ಪರಿಶ್ರಮದ ಫಲವೇ ಪ್ರಕೃತ ಗ್ರಂಥ. ಇದನ್ನು ಶ್ರೀ ಶೇಷದಾಸರ ಆರಾಧನೆ ಸೇವಾಸಂಘದ ವತಿಯಿಂದ ಪ್ರಕಾಶನಗೊಳಿಸಲು ಹರ್ಷವಾಗುತ್ತದೆ. ಈ ಗ್ರಂಥದಲ್ಲಿ ತಂತ್ರಸಾರೋಕ್ತ, ದಾಸರಾಯರ ಕೃತಿಗಳ ಆಧಾರವಾಗಿರಿಸಿಕೊಂಡು ಭಗವಂತನ ಅನಂತಾನಂತ ರೂಪಗಳಲ್ಲಿ ನಾರಾಯಣಾದಿ ಪಂಚ ರೂಪಗಳು, ಕೇಶವಾದಿ ಚತುರ್ವಿಂಶತಿ ರೂಪಗಳು, ಅಜಾದಿ 51 ರೂಪಗಳು ಇವುಗಳ ಚಿತ್ರಣಗಳನ್ನು ಸಾಧಕನ ಚಿಂತನೆಗೆ ಅನುಕೂಲವಾಗಲೆಂದು ನೀಡಲಾಗಿದೆ. ಪ್ರಸ್ತುತ ಗ್ರಂಥಕ್ಕೆ ಆಶೀರ್ವಚನವನ್ನು ಅನುಗ್ರಹಿಸಿ ಪ್ರೋತ್ಸಾಹಿಸಿದ ಪರಮ ಪೂಜ್ಯ ಶ್ರೀ, ಶ್ರೀ ಸುಯತೀಂದ್ರ ತೀರ್ಥ

ಶ್ರೀಪಾದಂಗಳವರು, ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನ, ಶ್ರೀ ರಾಘವೇಂದ್ರ ಸ್ವಾಮಿಗಳ ಮಠ, ಮಂತ್ರಾಲಯ ಇವರ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕ ಅನಂತಾನಂತ ನಮಸ್ಕಾರಗಳು. ಅಜಾದಿ 51 ಭಗವದ್ರೂಪಗಳ ಚಿತ್ರಣ ಚಿತ್ರಿಸುವಲ್ಲಿ ಪೂಜ್ಯ ಶ್ರೀ ಪಂಡಿತ ಬನ್ನಂಜೆ ಗೋವಿಂದಾಚಾರ್ಯರು ಸಂಪಾದಿಸಿದ ಶ್ರೀಮದಾಚಾರ್ಯರು ರಚಿಸಿದ ತಂತ್ರಸಾರ ಸಂಗ್ರಹ ಗ್ರಂಥವು ಆಧಾರವಾಗಿದೆ. ಅವರಿಗೆ ನಮ್ಮ ನಮನಗಳು. ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರು, ಆಪ್ತ ಕಾರ್ಯದರ್ಶಿಗಳು, ಶ್ರೀ ರಾಘವೇಂದ್ರ ಸ್ವಾಮಿಗಳ ಮಠ, ಮಂತ್ರಾಲಯ ಇವರು ಅಭಿಮಾನಪೂರ್ವಕವಾಗಿ ನಾಲ್ಕು ಮಾತುಗಳನ್ನು ಹೇಳಿದ್ದಾರೆ ಅವರಿಗೆ ಕೃತಾಜ್ಞತಾಪೂರ್ವಕ ನಮನಗಳು. ಡಾ ಎನ್. ವಾದಿರಾಜಾಚಾರ್ಯರು ನಾಲ್ಕಾರು ಹಿತವಚನಗಳನ್ನು ತಿಳಿಸಿದ್ದಾರೆ ಅವರಿಗೂ ಕೂಡ ನಮ್ಮ ನಮನಗಳು. ಈ ಪುಸ್ತಕಕ್ಕೆ ಸುಂದರವಾದ ಮುನ್ನುಡಿ ಬರದುಕೊಟ್ಟು ಕರುಣಿಸಿದ ಹಿರಿಯರು, ದಾಸಸಾಹಿತ್ಯಾಸಕ್ತರು ದಾಸಸಾಹಿತ್ಯದ ಅನೇಕ ಕೃತಿಗಳನ್ನು ಸಂಪಾದಿಸಿ ವಿಶೇಷ ಸೇವೆಯನ್ನು ಮಾಡುತ್ತಿರುವ ಶ್ರೀ ಕಿಶನರಾವ್ ಜಾಲಿಹಾಳ ಇವರಿಗೆ ನಮಸ್ಕಾರಗಳು . ಗ್ರಂಥ ಪ್ರಕಾಶನಕ್ಕೆ ವಿಶೇಷ ಧನ ಸಹಾಯ ಮಾಡಿದ ದೆಹಲಿವಾಸಿಗಳಾದ ಶ್ರೀಯತ ರಂಗನಾಥ ಹಾಗೂ ಕುಮಾರಿ ನೀಲಾ ಇವರಿಗೆ ಕೃತಜ್ಞತೆಗಳು. ಈ ಗ್ರಂಥ ಪ್ರಕಾಶನದಲ್ಲಿ ವಿಶೇಷ ಆಸಕ್ತಿ ತೋರಿದ ಶ್ರೀ ಗುರುಮಧ್ವರಾವ್ ಉಪ್ಪಲಿ ಇವರ ವಿಶೇಷ ಅನುಗ್ರಹಪಾತ್ರರು ಹಾಗೂ ಶ್ರೀ ಶ್ರೇಷದಾಸರ ಆರಾಧನೆ ನಡೆಸುವಲ್ಲಿ ವಿಶೇಷ ಪರಿಶ್ರಮಿಸುತ್ತಿರುವ ಶ್ರೀ ಸೇತುರಾವ್ ಹರಪನಹಳ್ಳಿ, ಎಮ. ಕೆ. ವಿಜಯೀಂದ್ರ ರಾಯರು, ಶ್ರೀ ಗೋವಣ್ಣ ಪಟವಾರಿ, ಶ್ರೀ ಗುರುರಾಜರಾವ್ ಬಳ್ಳಾರಿ ಶ್ರೀ ಅನಂತ ಕೊಳ್ಳಿ ಇವರಿಗೆ ನಮನಗಳು. ಗ್ರಂಥದ ಉಪಯೋಗವಾದಲ್ಲಿ ಈ ಸೇವೆಯು ಸಾರ್ಥಕವಾಗುತ್ತದೆ. ಈ ಕೃತಿಯನ್ನು ರಚಿಸಲು ಸಹಕರಿಸಿದ ಸುಜಯೀಂದ್ರ ವಡೆಯರ್ ಮೈಸೂರು, ಇವರಿಗೂ ವಂದನೆಗಳು.

ಆವನಾದರು ಹಳಿಯಲಿ ಉಗಳಲಿ। ಆವನಾದರು ಬೈಯಲಿ ಕಾಯಲಿ
ಆವನಾದರು ಹೊಡೆಯಲಿ ತಡೆಯಲಿ। ಆವನಾದರು ಪೊಗಳಲಿ ಅಟ್ಟಲಿ
ಆವನಾದರು ಉಣಿಸಲಿ ಉಡಿಸಲಿ। ಆವನಾದರು ಛೀ ಛೀ ಎನಲಿ
ಆವನಾದರು ಥೂ ಥೂ ಅನಲಿ ಆವನಾದರು ಭಂಗಿಸಲಿ ಮ-
ತ್ತಾವನಾದರು ಹಂಗಿಸಲಿ। ಆವನಾದರು ಏನೇನನಲಿ

ಆವದಾದರೀ ವರ್ಣಗಳೆಲ್ಲ ಭಗವನ್ನಾಮಗಳೂ
ಜೀವನ್ಮುಕ್ತನು ಈ ವಿಧದಿ ತಿಳಿದವನು --------
ಕಾಮಜನಕ ನಮ್ಮ ವಿಜಯವಿಠ್ಠಲರೇಯ
ಆವಾವ ವರ್ಣಗಳಂತೆ ವಳಗಿದ್ದು ಕಾವನು ಶರಣರನು ವಡನೊಡನೆ ಬರುವ॥

ಜತೆ
ಅಕ್ಷರಾಕ್ಷರದಿಂದ ಭಗವನ್ನಾಮವೆ ಚಿಂತಿಸು
ಅಕ್ಷರಾಕ್ಷರ ಪುರುಷ ವಿಜಯ ವಿಠ್ಠಲ ಸುಳಿವ

ಪ್ರಕಾಶಕರು
ಶ್ರೀ ಗುರುಮಧ್ವರಾವ್ ಉಪ್ಪಲಿ ಕೃಪಾಪೋಷಿತ ಶ್ರೀ ಶೇಷದಾಸರ
ಆರಾಧನಾ ಸೇವಾ ಸಂಘ ಬೆಂಗಳೂರು

# ವಟಪತ್ರಶಾಹಿ



ವಸುದೇವಸುಂತಂದೇವಂ । ಕಂಸ ಚಾಣೂರ ಮರ್ಧನಂ ।
ದೇವಕೀಪರಮಾನಂದಂ । ಕೃಷ್ಣಂ ವಂದೇ ಜಗದ್ಗುರು ॥

# ಅನಿರುದ್ಧ

ಚಕ್ರಸ್ಥಾನೇ ಭವೇಚ್ಚರ್ಮ ಗದಾಸ್ಥಾನೇಽಸಿರೇವ ಚ ।



## ಪ್ರದ್ಯುಮ್ನ

ಚಕ್ರಸ್ಥಾನೇ ಭವೇಚ್ಚಾಪೋ ಗದಾಸ್ಥಾನೇ ಭವೇಚ್ಛರಃ ।



## ಸಂಕರ್ಷಣ

ಗದಾಸ್ಥಾನೇ ತು ಮುಸಲಂ ಚಕ್ರಸ್ಥಾನೇ ಚ ಲಾಂಗಲಮ್ ।



# ವಾಸುದೇವ

ದಕ್ಷಿಣೇ ತು ಕರೇ ಚಕ್ರಮಧಸ್ತಾತ್ ಪದ್ಮಮೇವ ಚ ।
ವಾಮೇ ಶಂಖಂ ಗದಾಽಧಸ್ತಾತ್ ವಾಸುದೇವಸ್ಯ ಲಕ್ಷಣಮ್ ॥



## ದಶಾವತಾರ ರೂಪಗಳು

### ಮತ್ಸ್ಯಾವತಾರ



ಓಂ ಮತ್ಸ್ಯಾಯ ನಮಃ

**ओं मत्स्याय नमः**

ஓம் மத்ஸ்யாய நமஃ

ఓం మత్స్యాయ నమః



# ಕೂರ್ಮಾವತಾರ



ಓಂ ಕೂರ್ಮಾಯ ನಮಃ
ओं कूर्माय नमः
ஓம் கூர்மாய நமஃ
ఓం కూర్మాయ నమః



# ವರಾಹಾವತಾರ



ಓಂ ವರಾಹಾಯ ನಮಃ

ओं वराहाय नमः

ஓம் வராஹாய நமஃ

ఓం వరాహాయ నమః



# ನರಸಿಂಹಾವತಾರ



ಓಂ ನಾರಸಿಂಹಾಯ ನಮಃ

**ओं नारसिंहाय नमः**

ஓம் நாரஸிம்ஹாய நமஃ

ఓం నారసింహాయ నమః



# ವಾಮನಾವತಾರ



ಓಂ ವಾಮನಾಯ ನಮಃ

ओं वामनाय नमः

ஓம் வாமநாய நமஃ

ఓం వామనాయ నమః



## ಪರಶುರಾಮಾವತಾರ



ಓಂ ಪರಶುರಾಮಾಯ ನಮಃ

ओं परशुरामाय नमः

ஓம் பரஶுராமாய நம꞉

ఓం పరశురామాయ నమః



## ರಾಮಾವತಾರ



ಓಂ ರಾಮಾಯ ನಮಃ

ओं रामाय नमः

ஓம் ராமாய நமஃ

ఓం రామాయ నమః



## ಕೃಷ್ಣಾವತಾರ



ಓಂ ಕೃಷ್ಣಾಯ ನಮಃ

ओं कृष्णाय नमः

ஓம் க்ருஷ்ணாய நமஃ

ఓం కృష్ణాయ నమః



# ಬುದ್ಧಾವತಾರ



ఓం బౌద్ధాయ నమః

ओं बौद्धाय नमः

ஓம் பௌத்தாய நமஃ

ಓಂ ಬೌದ್ಧಾಯ ನಮಃ



# ಕಲ್ಕ್ಯವತಾರ



ಓಂ ಕಲ್ಕಿಯೇ ನಮಃ

ओं कल्किये नमः

ஓம் கல்கியே நம:

కల్కియే నమః



೧. ಓಂ ತಂ ಕೇಶವಾಯ ನಮಃ
ओं तं केशवाय नमः
ஓம் தம் கேஶவாய நமஃ
ఓం తం కేశవాయ నమః



| ಕೇಶವ | |
|---|---|
| ತತ್ವ | ಅವ್ಯಕ್ತ |
| ರಮಾ ರೂಪ | ಶ್ರೀ |
| ಗಾಯತ್ರ್ಯಕ್ಷರ | ತತ್ |
| ಅಂಗಾಂಗ | ಬಲಭುಜ |



ಅವ್ಯಕ್ತ ತತ್ವ
ಬಲಭುಜ

೨. ಓಂ ಸಂ ನಾರಾಯಣಾಯ ನಮಃ
ओं सं नारायणाय नमः
ஓம் ஸம் நாராயணாய நமஃ
ఓం సం నారాయణాయ నమః



| ನಾರಾಯಣ | |
|---|---|
| ತತ್ವ | ಮಹತತ್ವ |
| ರಮಾ ರೂಪ | ಲಕ್ಷ್ಮೀ |
| ಗಾಯತ್ರ್ಯಕ್ಷರ | ಸ |
| ಅಂಗಾಂಗ | ಎಡಭುಜ |



ಮಹತ್ತತ್ವ
ಎಡಬುಜ

ಕೇಶವಾದಿ ರೂಪಗಳು

ಅಜಾದಿ ಭಗವದ್ರೂಪಗಳು

೩. ಓಂ ವಿಂ ಮಾಧವಾಯ ನಮಃ

ओं विं माधवाय नमः

ஓம் விம் மாதவாய நமஃ

ఓం విం మాధవాయ నమః





| ಮಾಧವ | |
|---|---|
| ತತ್ವ | ಅಹಂಕಾರ |
| ರಮಾ ರೂಪ | ರಮಾ |
| ಗಾಯತ್ರಾಕ್ಷರ | ವಿ |
| ಅಂಗಾಂಗ | ಬಲತೊಡೆ |

ಅಹಂಕಾರ ತತ್ವ

ಬಲತೊಡೆ

೪. ಓಂ ತುಂ ಗೋವಿಂದಾಯ ನಮಃ

ओं तुं गोविंदाय नमः

ஓம் தும் கோவிம்தாய நமஃ

ఓం తుం గోవిందాయ నమః





| ಗೋವಿಂದ | |
|---|---|
| ತತ್ವ | ಮನಸ್ಸು |
| ರಮಾ ರೂಪ | ಪದ್ಮ |
| ಗಾಯತ್ರಾಕ್ಷರ | ತುಃ |
| ಅಂಗಾಂಗ | ಎಡತೊಡೆ |

ಮನಸ್ಸು

ಎಡತೊಡೆ

೫. ಓಂ ವಂ ವಿಷ್ಣವೇ ನಮಃ
ओं वं विष्णवे नमः
ஓம் வம் விஷ்ணவே நமஃ
ఓం వం విష్ణవే నమః



| ವಿಷ್ಣು | |
|---|---|
| ತತ್ವ | ಕರ್ಣ |
| ರಮಾ ರೂಪ | ಪದ್ಮಿನೀ |
| ಗಾಯತ್ರಾಕ್ಷರ | ವ |
| ಅಂಗಾಂಗ | ಕಿವಿ |



ಕರ್ಣತತ್ವ – ಕಿವಿ

೬. ಓಂ ರೇಂ ಮಧುಸೂಧನಾಯ ನಮಃ
ओं रें मधुसूधनाय नमः
ஓம் ரேம் மதுஸூதநாய நமஃ
ఓం రేం మధుసూధనాయ నమః



| ಮಧುಸೂಧನ | |
|---|---|
| ತತ್ವ | ತ್ವಕ್ |
| ರಮಾ ರೂಪ | ಕಮಲಾ |
| ಗಾಯತ್ರಾಕ್ಷರ | ರೇ |
| ಅಂಗಾಂಗ | ಚರ್ಮ |



ತ್ವಕ್ – ಚರ್ಮ

ಕೇಶವಾದಿ ರೂಪಗಳು

ಅಜಾದಿ ಭಗವದ್ರೂಪಗಳು

ಓಂ ಣಂ ತ್ರಿವಿಕ್ರಮಾಯ ನಮಃ
ओं णं त्रिविक्रमाय नमः
ஓம் ணம் த்ரிவிக்ரமாய நமஃ
ఓం ణం త్రివిక్రమాయ నమః





नेत्र - ಕಣ್ಣು

| ತ್ರಿವಿಕ್ರಮ | |
|---|---|
| ತತ್ವ | ನೇತ್ರ |
| ರಮಾ ರೂಪ | ರಮಾ |
| ಗಾಯತ್ರಾಕ್ಷರ | ಣಿ |
| ಅಂಗಾಂಗ | ಕಣ್ಣು |

ಓಂ ಯಂ ವಾಮನಾಯ ನಮಃ
ओं यं वामनाय नमः
ஓம் யம் வாமநாய நமஃ
ఓం యం వామనాయ నమః





ಜಿಹ್ವಾ - ನಾಲಿಗೆ

| ವಾಮನ | |
|---|---|
| ತತ್ವ | ಜಿಹ್ವಾ |
| ರಮಾ ರೂಪ | ವೃಷಾಕಪಿ |
| ಗಾಯತ್ರಾಕ್ಷರ | ಯಂ |
| ಅಂಗಾಂಗ | ನಾಲಿಗೆ |

ಕೇಶವಾದಿ ರೂಪಗಳು

ಅಜಾದಿ ಭಗವದ್ರೂಪಗಳು

ಓಂ ಭಂ ಶ್ರೀಧರಾಯ ನಮಃ
ओं भं श्रीधराय नमः
ஓம் பம் ஸ்ரீதராய நமஂஃ
ఓం భం శ్రీధరాయ నమః





| ಶ್ರೀಧರ | |
|---|---|
| ತತ್ವ | ಘ್ರಾಣ |
| ರಮಾ ರೂಪ | ಧನ್ಯಾ |
| ಗಾಯತ್ರಾಕ್ಷರ | ಭ |
| ಅಂಗಾಂಗ | ಮೂಗು |

ಘ್ರಾಣ - ಮೂಗು

ಓಂ ಗೋಂ ಹೃಷೀಕೇಶಾಯ ನಮಃ
ओं गों हृषीकेशाय नमः
ஓம் கோம் ஹ்ருஷீகேஶாய நமஂஃ
ఓం గోం హృషీకేశాయ నమః





| ಹೃಷಿಕೇಶ | |
|---|---|
| ತತ್ವ | ವಾಕ್ |
| ರಮಾ ರೂಪ | ವೃದ್ಧೀ |
| ಗಾಯತ್ರಾಕ್ಷರ | ಗೋ |
| ಅಂಗಾಂಗ | ಬಾಯಿ |

ವಾಕ್ - ಬಾಯಿ

ಓಂ ದೇಂ ಪದ್ಮನಾಭಾಯ ನಮಃ
ओं दें पद्मनाभाय नमः
ஓம் கோம் ஹ்ருஷீகேஶாய நம:
ఓం దేం పద్మనాభాయ నమః





| ಪದ್ಮನಾಭ | |
|---|---|
| ತತ್ವ | ಪಾಣಿ |
| ರಮಾ ರೂಪ | ಯಜ್ಞಾ |
| ಗಾಯತ್ರಾಕ್ಷರ | ದೇ |
| ಅಂಗಾಂಗ | ಕೈ |

ಪಾಣಿ – ಕೈ

ಓಂ ವಂ ದಾಮೋದರಾಯ ನಮಃ
ओं वं दामोदराय नमः
ஓம் வம் தாமோதராய நம:
ఓం వం దామోదరాయ నమః





| ದಾಮೋದರ | |
|---|---|
| ತತ್ವ | ಪಾದ |
| ರಮಾ ರೂಪ | ಇಂದಿರಾ |
| ಗಾಯತ್ರಾಕ್ಷರ | ವ |
| ಅಂಗಾಂಗ | ಪಾದ |

ಪಾದ – ಕಾಲು

ಓಂ ಸ್ಯಂ ಸಂಕರ್ಷಣಾಯ ನಮಃ
ओं स्यं संकर्षणाय नमः
ஓம் ஸ்யம் ஸம்கர்ஷணாய நம:
ఓం స్యం సంకర్షణాయ నమః





| ಸಂಕರ್ಷಣ | |
|---|---|
| ತತ್ವ | ಪಾಯು |
| ರಮಾ ರೂಪ | ಹಿರಣ್ಯಾ |
| ಗಾಯತ್ರಾಕ್ಷರ | ಸ್ಯ |
| ಅಂಗಾಂಗ | ಮಲವಿಸರ್ಜನೆ |

ಪಾಯು – ಮಲವಿಸರ್ಜನೆ

ಓಂ ಧೀಂ ವಾಸುದೇವಾಯ ನಮಃ
ओं धीं वासुदेवाय नमः
ஓம் தீம் வாஸுதேவாய நம:
ఓం ధీం వాసుదేవాయ నమః





| ವಾಸುದೇವ | |
|---|---|
| ತತ್ವ | ಉಪಸ್ಥ |
| ರಮಾ ರೂಪ | ಹರಿಣೀ |
| ಗಾಯತ್ರಾಕ್ಷರ | ಧೀ |
| ಅಂಗಾಂಗ | ಜನನೇಂದ್ರಿಯ |

ಉಪಸ್ಥ – ಜನನೇಂದ್ರಿಯ

ಕೇಶವಾದಿ ರೂಪಗಳು.

ಅಜಾದಿ ಭಗವದ್ರೂಪಗಳು

ಓಂ ಮಂ ಪ್ರದ್ಯುಮ್ನಾಯ ನಮಃ
ओं मं प्रद्युम्नाय नमः
ஓம் மம் ப்ரத்யும்நாய நமஃ
ఓం మం ప్రద్యుమ్నాయ నమః





| ಪ್ರದ್ಯುಮ್ನ | |
|---|---|
| ತತ್ವ | ಶಬ್ಧ |
| ರಮಾ ರೂಪ | ಸತ್ಯಾ |
| ಗಾಯತ್ರಾಕ್ಷರ | ಮ |
| ಅಂಗಾಂಗ | ಗುಡುಗು ಸಿಡಿಲು |

ಶಬ್ದ – ಗುಡುಗು ಸಿಡಿಲು

ಓಂ ಹಿಂ ಅನಿರುದ್ಧಾಯ ನಮಃ
ओं हिं अनिरुद्धाय नमः
ஓம் ஹிம் அநிருத்தாய நமஃ
ఓం హిం అనిరుద్ధాయ నమః





| ಅನಿರುದ್ಧ | |
|---|---|
| ತತ್ವ | ಸ್ಪರ್ಷ |
| ರಮಾ ರೂಪ | ನಿತ್ಯಾ |
| ಗಾಯತ್ರಾಕ್ಷರ | ಹಿ |
| ಅಂಗಾಂಗ | ಸ್ಪರ್ಷ |

ಸ್ಪರ್ಷ – ಸ್ಪರ್ಶ

ಓಂ ಧಿಂ ಪುರುಷೂತ್ತಮಾಯ ನಮಃ
ओं धिं पुरुषूत्तमाय नमः
ஓம் திம் புருஷூத்தமாய நமஃ
ఓం ధిం పురుషూత్తమాయ నమః





| ಪುರುಷೋತ್ತಮ | |
|---|---|
| ತತ್ವ | ರೂಪ |
| ರಮಾ ರೂಪ | ಆನಂದಿನೀ |
| ಗಾಯತ್ರಾಕ್ಷರ | ಧೀ |
| ಅಂಗಾಂಗ | ಆಕೃತಿ |

ರೂಪ – ಆಕೃತಿ

ಓಂ ಯೋಂ ಅಧೋಕ್ಷಜಾಯ ನಮಃ
ओं यों अधोक्षजाय नमः
ஓம் யோம் அதோக்ஷஜாய நமஃ
ఓం యోం అధోక్షజాయ నమః





| ಅಧೋಕ್ಷಜ | |
|---|---|
| ತತ್ವ | ರಸ |
| ರಮಾ ರೂಪ | ಆಸೌಜ್ಞಾ |
| ಗಾಯತ್ರಾಕ್ಷರ | ಯೋ |
| ಅಂಗಾಂಗ | ಆಲಾಪನೆ |

ರಸ – ಆಲಾಪನೆ

ಓಂ ಯೋಂ ನಾರಸಿಂಹಾಯ ನಮಃ
**ओं यों नारसिंहाय नमः**
**ஓம் யோம் நாரஸிம்ஹாய நமஃ**
ఓం యోం నారసింహాయ నమః





| ನರಸಿಂಹ | |
|---|---|
| ತತ್ವ | ಗಂಧ |
| ರಮಾ ರೂಪ | ಸುಧಾದೇವಿ |
| ಗಾಯತ್ರಾಕ್ಷರ | ಯೋ |
| ಅಂಗಾಂಗ | ವಾಸನೆ |

ಗಂಧ - ವಾಸನೆ

ಓಂ ನಂ ಅಚ್ಯುತಾಯ ನಮಃ
**ओं नं अच्युताय नमः**
**ஓம் நம் அச்யுதாய நமஃ**
ఓం నం అచ్యుతాయ నమః





| ಅಚ್ಯುತ | |
|---|---|
| ತತ್ವ | ಆಕಾಶ |
| ರಮಾ ರೂಪ | ಸುಗಂಧೀ |
| ಗಾಯತ್ರಾಕ್ಷರ | ನಃ |
| ಅಂಗಾಂಗ | ಆಗಸ |

ಆಕಾಶ - ಆಗಸ

ಕೇಶವಾದಿ ರೂಪಗಳು

ಅಜಾದಿ ಭಗವದ್ರೂಪಗಳು

ಓಂ ಪ್ರಂ ಜನಾರ್ಧನಾಯ ನಮಃ
ओं प्रं जनार्धनाय नमः
ഓം പ്രം ജനാർദ്ധനായ നമഃ
ఓం ప్రం జనార్ధనాయ నమః





| ಜನಾರ್ಧನ | |
|---|---|
| ತತ್ವ | ವಾಯು |
| ರಮಾ ರೂಪ | ಸುಂದರೀ |
| ಗಾಯತ್ರಾಕ್ಷರ | ಪ್ರ |
| ಅಂಗಾಂಗ | ಗಾಳಿ |

ವಾಯು – ಗಾಳಿ

ಓಂ ಚೋಂ ಉಪೇಂದ್ರಾಯ ನಮಃ
ओं चों उपेंद्राय नमः
ഓം ചോം ഉപേന്ദ്രായ നമഃ
ఓం చోం ఉపేంద్రాయ నమః





| ಉಪೇಂದ್ರ | |
|---|---|
| ತತ್ವ | ತೇಜ |
| ರಮಾ ರೂಪ | ವಿದ್ಯಾ |
| ಗಾಯತ್ರಾಕ್ಷರ | ಚೋ |
| ಅಂಗಾಂಗ | ಅಗ್ನಿ |

ತೇಜ – ಅಗ್ನಿ

ಕೇಶವಾದಿ ರೂಪಗಳು

ಅಜಾದಿ ಭಗವದ್ರೂಪಗಳು

ಓಂ ದಂ ಹರಯೇ ನಮಃ
ओं दं हरये नमः
ஓம் தம் ஹரயே நமஃ
ఓం దం హరయే నమః



| ಹರಿ | |
|---|---|
| ತತ್ವ | ಆಪ್ |
| ರಮಾ ರೂಪ | ಸುಶೀಲಾ |
| ಗಾಯತ್ರಾಕ್ಷರ | ದ |
| ಅಂಗಾಂಗ | ನೀರು(ಮಳೆ) |



ಆಪ್ – ನೀರು (ಮಳೆ)

ಓಂ ಯಾಂ ಕೃಷ್ಣಾಯ ನಮಃ
ओं यां कृष्णाय नमः
ஓம் யாம் க்ருஷ்ணாய நமஃ
ఓం యాం కృష్ణాయ నమః



| ಶ್ರೀಕೃಷ್ಣ | |
|---|---|
| ತತ್ವ | ಪೃಥ್ವೀ |
| ರಮಾ ರೂಪ | ಸುಲಕ್ಷಣಾ |
| ಗಾಯತ್ರಾಕ್ಷರ | ಯಾ |
| ಅಂಗಾಂಗ | ಭೂಮಿ |



ಪೃಥ್ವಿ – ಭೂಮಿ

## ೧.ಮುಂದಲೆ(ಹಣೆಯ ತುದಿ)





ഓം അം അജായ നമഃ
ఓం అం అజాయ నమః
ओं अं अजाय नमः
ஓம் அம் அஜாய நமஃ

## ೨.ಇಡಿಯ ಮೋರೆ





ഓം ആം ആനംദായ നമഃ
ఓం ఆం ఆనందాయ నమః
ओं आं आनंदाय नमः
ஓம் ஆம் ஆநம்தாய நமஃ

## ೩. ಬಲ ಕಣ್ಣು





ಓಂ ಇಂ ಇಂದ್ರಾಯ ನಮಃ
ఓం ఇం ఇంద్రాయ నమః
ओं इं इंद्राय नमः
ஓம் இம் இம்த்ராய நமஃ

## ೪. ಎಡ ಕಣ್ಣು





ಓಂ ಈಂ ಈಶಾನಾಯ ನಮಃ
ఓం ఈం ఈశానాయ నమః
ओं ईं ईशानाय नमः
ஓம் ஈம் ஈஶாநாய நமஃ

ಋ. ಬಲ ಕಿವಿ





ఓం ఉం ఉగ్రాయ నమః
ಓಂ ಉಂ ಉಗ್ರಾಯ ನಮಃ
ओं उं उग्राय नमः
ஓம் உம் உக்ராய நமஃ

ೠ. ಎಡ ಕಿವಿ





ఓం ఊం ఊర్జాయ నమః
ಓಂ ಊಂ ಊರ್ಜಾಯ ನಮಃ
ओं ऊं ऊर्जाय नमः
ஓம் ஊம் ஊர்ஜாய நமஃ

## ೯. ಬಲ ಕೆನ್ನೆ





ಓಂ ಲ್ಂ ಲ್ಶಾಯ ನಮಃ
ఓం ల్ం ల్శాయ నమః
ओं ल्ं ल्शाय नमः
ஓம் ல்ம் ல்ஶாய நமஃ

## ೧೦. ಎಡ ಕೆನ್ನೆ





ಓಂ ಲ್ಂ ಲ್ಜಯೇ ನಮಃ
ఓం ల్ం ల్జయే నమః
ओं ल्ं ल्जये नमः
ஓம் ல்ம் ல்ஜயே நமஃ

## ೧೧. ಮೇಲಿನ ತುಟಿ





ఓం ఏం ఏకాత్మనే నమః
ഓം ഏം ഏകാത്മനേ നമഃ
ओं एं एकात्मने नमः
ஓம் ஏம் ஏகாத்மநே நமஃ

## ೧೨. ಕೆಳಗಿನ ತುಟಿ





ఓం ఐం ఐరాయ నమః
ഓം ഐം ഐരായ നമഃ
ओं ऐं ऐराय नमः
ஓம் ஐம் ஐராய நமஃ

## ೧೩. ಮೇಲಿನ ಹಲ್ಲುಗಳ ಸಾಲು





ಓಂ ಓಜಭೃತೇ ನಮಃ
ఓం ఓజభృతే నమః
ओं ओजभृते नमः
ஓம் ஓஜப்ருதே நம:

## ೧೪. ಕೆಳಗಿನ ಹಲ್ಲುಗಳ ಸಾಲು





ಓಂ ಔಂ ಔರಸಾಯ ನಮಃ
ఓం ఔం ఔరసాయ నమః
ओं औं औरस[illegible] नमः
ஓம் ஔம் ஔரஸாய நம:

## ೧೫. ನೆತ್ತಿ





ഓം അം അന്തായ നമഃ

ఓం అం అంతాయ నమః

ओं अं अंताय नमः

ஓம் ஔளம் ஔளரஸாய நமஃ

## ೧೬. ವಾಗಿಂದ್ರಿಯ(ನಾಲಿಗೆ)





ഓം അഃ അര്ധഗര്ഭായ നമഃ

ఓం అః అర్ధగర్భాయ నమః

ओं अः अर्धगर्भाय नमः

ஓம் அஃ அர்தகர்பாய நமஃ

## ೧೭. ಬಲತೋಳಿನ ಕಂಕುಳ ಸಂಧಿ





ಓಂ ಕಂ ಕಪಿಲಾಯ ನಮಃ
ఓం కం కపిలాయ నమః
ओं कं कपिलाय नमः
ஓம் கம் கபிலாய நம:

## ೧೮. ಬಲತೋಳಿನ ಮೊಣಗಂಟು





ಓಂ ಖಂ ಖಪತಯೇ ನಮಃ
ఓం ఖం ఖపతయే నమః
ओं खं खपतये नमः
ஓம் கம் கபதயே நம:

## ೧೯. ಬಲತೋಳಿನ ಮಣಿಗಂಟು





ഓം ഗം ഗരുഡാസനായ നമഃ
ఓం గం గరుడాసనాయ నమః
ओं गं गरुडासनाय नमः
ஓம் கம் கருடாஸநாய நமஃ

## ೨೦.ಬಲಗೈಯ ಬೆರಳುಗಳ ಸಂದಿ





ഓം ഘം ഘർമായ നമഃ
ఓం ఘం ఘర్మాయ నమః
ओं घं घर्माय नमः
ஓம் கம் கர்மாய நமஃ

## ೨೧. ಬಲಗೈಯ ಬೆರಳುಗಳ ತುದಿ





ಓಂ ಙಂ ಙಸಾರಾಯ ನಮಃ
ఓం ఙం ఙసారాయ నమః
ओं ङं ङसाराय नमः
ஓம் ஙம் ஙஸாராய நமஃ

## ೨೨.ಎಡತೋಳಿನ ಕಂಕುಳ ಸಂಧಿ





ಓಂ ಚಂ ಚಾರ್ವಂಗಾಯ ನಮಃ
ఓం చం చార్వంగాయ నమః
ओं चं चार्वंगाय नमः
ஓம் சம் சார்வம்காய நமஃ

## ೨೩.ಎಡತೋಳಿನ ಮೊಣಗಂಟು





ಓಂ ಛಂ ಛಂದೋಗಮ್ಯಾಯ ನಮಃ

ఓం ఛం ఛందోగమ్యాయ నమః

ओं छं छंदोगम्याय नमः

ஓம் சம் சம்தோகம்யாய நமஃ

## ೨೪. ಎಡತೋಳಿನ ಮಣಿಗಂಟು





ಓಂ ಜಂ ಜನಾರ್ದನಾಯ ನಮಃ

ఓం జం జనార్దనాయ నమః

ओं जं जनार्दनाय नमः

ஓம் ஜம் ஜநார்தநாய நமஃ

## ೨೭.ಬಲಗಾಲಿನ ಸೊಂಟದ ಸಂಧಿ(ಕಟಿ)





ಓಂ ಟಂ ಟಂಕಿನೇ ನಮಃ
ఓం టం టంకినే నమః
ओं टं टंकिने नमः
ஓம் டம் டம்கிநே நமஃ

## ೨೮.ಬಲಗಾಲಿನ ಮೊಣಗಂಟು(ಜಾನು)





ಓಂ ಠಂ ಠಕಲಾಯ ನಮಃ
ఓం ఠం ఠకలాయ నమః
ओं ठं ठकलाय नमः
ஓம் டம் டகலாய நமஃ

## ೨೯.ಬಲಗಾಲಿನ ಹರಡುಗಳ ಸಂಧಿ





### ಓಂ ಡಂ ಡರಕಾಯ ನಮಃ

ಓಂ ಡಂ ಡರಕಾಯ ನಮಃ
ఓం డం డరకాయ నమః
ओं डं डरकाय नमः
ஓம் டம் டரகாய நமஃ

## ೩೦.ಬಲಗಾಲಿನ ಬೆರಳುಗಳ ಸಂಧಿ





ಓಂ ಢಂ ಢರಿಣೆ ನಮಃ
ఓం ఢం ఢరిణే నమః
ओं ढं ढरिणे नमः
ஓம் டம் டரிணெ நமஃ

## ೩೧. ಬಲಗಾಲಿನ ಬೆರಳುಗಳ ತುದಿ





ಓಂ ಣಂ ಣಾತ್ಮನೇ ನಮಃ
ഓം ണം ണാത്മനേ നമഃ
ओं णं णात्मने नमः
ஓம் ணம் ணாத்மநே நமஃ

## ೩೨.ಎಡಗಾಲಿನ ಸೊಂಟದ ಸಂಧಿ(ಕಟಿ)





ಓಂ ತಂ ತಾರಾಯ ನಮಃ
ఓం తం తారాయ నమః
ओं तं ताराय नमः
ஓம் தம் தாராய நமஃ

## ೩೩.ಎಡಗಾಲಿನ ಮೊಣಗಂಟು(ಜಾನು)





ಓಂ ಥಂ ಥಭಾಯ ನಮಃ
ఓం థం థభాయ నమః
ओं थं थभाय नमः
ஓம் தம் தபாய நமஃ

## ೩೪.ಎಡಗಾಲಿನ ಹರಡುಗಳ ಸಂಧಿ





ಓಂ ದಂ ದಂಡಿನೇ ನಮಃ
ఓం దం దండినే నమః
ओं दं दंडिने नमः
ஓம் தம் தம்டிநே நமஃ

## ೩೫. ಎಡಗಾಲಿನ ಬೆರಳುಗಳ ಸಂಧಿ





ಓಂ ಧಂ ಧನ್ವಿನೇ ನಮಃ
ఓం ధం ధన్వినే నమః
ओं धं धन्विने नमः
ஓம் தம் தந்விநே நமஃ

## ೩೬. ಎಡಗಾಲಿನ ಬೆರಳುಗಳ ತುದಿ





ಓಂ ನಂ ನಮ್ಯಾಯ ನಮಃ
ఓం నం నమ్యాయ నమః
ओं नं नम्याय नमः
ஓம் நம் நம்யாய நமஃ

## ೩೭.ಹೊಟ್ಟೆಯ ಬಲ ಪಕ್ಕ





ಓಂ ಪಂ ಪರಾಯ ನಮಃ

ఓం పం పరాయ నమః

ओंपं पराय नमः

ஓம் பம் பராய நமஃ

## ೩೮.ಹೊಟ್ಟೆಯ ಎಡ ಪಕ್ಕ





ಓಂ ಫಂ ಫಲಿನೇ ನಮಃ

ఓం ఫం ఫలినే నమః

ओंफं फलिने नमः

ஓம் பம் பலிநே நமஃ

## ೩೯. ಬೆನ್ನು





ಓಂ ಬಂ ಬಲಿನೇ ನಮಃ
ఓం బం బలినే నమః
ओं बं बलिने नमः
ஓம் பம் பலிநே நமஃ

## ೪೦. ಜನನೇಂದ್ರಿಯ





ಓಂ ಭಂ ಭಗಾಯ ನಮಃ
ఓం భం భగాయ నమః
ओं भं भगाय नमः
ஓம் பம் பகாய நமஃ

## ೪೧. ಹೊಟ್ಟೆ





ಓಂ ಮಂ ಮನವೇ ನಮಃ
ఓం మం మనవే నమః
ओं मं मनवे नमः
ஓம் மம் மநவே நமஃ

## ೪೨. ಎದೆ





ಓಂಯಂ ಯಜ್ಞಾಯ ನಮಃ
ఓం యం యజ్ఞాయ నమః
ओं यं यज्ञाय नमः
ஓம் யம் யஜ்ஞாய நமஃ

## ೪೩.ತೊಗಲಿನ ಮೇಲು ಪದರ (ತ್ವಕ್)





ഓം രം രാമായ നമഃ

ఓం రం రామాయ నమః

ओं रं रामाय नमः

ஓம் ரம் ராமாய நமஃ

## ೪೪. ತೊಗಲು (ಚರ್ಮ)





ഓം ലം ലക്ഷ്മീപതയേ നമഃ

ഓം ലം ലക്ഷ്മീപതയേ നമഃ

ఓం లం లక్ష్మీపతయే నమః

ओं लं लक्ष्मीपतये नमः

ஓம் லம் லக்ஷ்மீபதயே நம

## ೪೫. ಮಾಂಸ





ಓಂವಂ ವರಾಯ ನಮಃ

ఓం వం వరాయ నమః

ओं वं वराय नमः

ஓம் வம் வராய நமஃ

## ೪೬.ನೆತ್ತರು (ರಕ್ತ)





ಓಂಶಂ ಶಾಂತಸಂವಿದೇ ನಮಃ

ఓం శం శాంతసంవిదే నమః

ओं शं शांतसंविदे नमः

ஓம் ஶம் ஶாம்தஸம்விதே நமஃ

## ೪೭.ಮೂಳೆಯ ಮೆದುಭಾಗ (ಮೇದಸ್)





ಓಂಷಂ ಷಡ್ಗುಣಾಯ ನಮಃ
ഓം ഷം ഷഡ്ഗുണായ നമഃ
ओं षं षड्गुणाय नमः
ஓம் ஷம் ஷட்குணாய நமஃ

## ೪೮. ಕೊಬ್ಬು (ಮೇದಸ್)





ಓಂಸಂ ಸಾರಾತ್ಮನೇ ನಮಃ
ഓം സം സാരാത്മനേ നമഃ
ओं सं सारात्मने नमः
ஓம் ஸம் ஸாராத்மநே நமஃ

## ೪೯.ಮೂಳೆ (ಅಸ್ಥಿ)





ಓಂಹಂ ಹಂಸಾಯ ನಮಃ
ఓం హం హంసాయ నమః
ओं हं हंसाय नमः
ஓம் ஹம் ஹம்ஸாய நமஃ

## ೫೦. ಉಸಿರು (ಪ್ರಾಣತತ್ವ)





ಓಂಳಂ ಳಾಳುಕಾಯ ನಮಃ
ఓం ళం ళాళుకాయ నమః
ओं ळं ळाळुकाय नमः
ஓம் ளம் ளாளுகாய நமஃ

## ೫೧. ಜೀವಕಲೆ





ಓಂಕ್ಷಂ ನೃಸಿಂಹಾಯ ನಮಃ
ఓం క్షం నృసింహాయ నమః
ओं क्षं नृसिंहाय नमः
ஓம் க்ஷம் ந்ருஸிம்ஹாய நமஃ

ಹರಿಕಥಾಮೃತಸಾರ ಗುರುಗಳ।
ಕರುಣದಿಂದಾಪನಿತು ಪೇಳುವೆ।
ಪರಮಭಗವದ್ಭಕ್ತರಿದನಾದರದಿ ಕೇಳುವದು॥
ಭೂ ಸಲಿಲ ಶಿಖಿ ಪವನ ಭೂತಾ ।
ಕಾಶದೊಳಗೈದೈದು ತನ್ಮಾ ।
ತ್ರಾ ಸಹಿತ ಒಂದಧಿಕ ಪಂಚಾಶದ್ವರ್ಣವೇದ್ಯ ॥
ಈ ಶರೀರದಿ ವ್ಯಾಪಿಸಿರ್ದು ಸು ।
ರಾಸುರರಿಗೆ ನಿರಂತರದಲಿ ಸು ।
ಖಾಸುಖಪ್ರದನಾಗಿ ಆಡುವ ದ್ವೇಷಿಪರ ಬಡಿವ ॥

ಭೂಮಿ, ನೀರು, ಅಗ್ನಿ, ವಾಯು, ಆಕಾಶ–ಪಂಚಭೂತಗಳು. ಶಬ್ದ, ಸ್ಪರ್ಶ, ಆದಿ ಪಂಚಗುಣಾತ್ಮಕ ಶರೀರದಲ್ಲಿ ಪರಮಾತ್ಮನು ಐವತ್ತೊಂದು ಅಕ್ಷರಗಳಿಂದ ತಿಳಿಯಲ್ಪಡುವನು. ಅವನು ಈ ಶರೀರದಲ್ಲಿ ವ್ಯಾಪಿಸಿ ದೇವ ದಾನವರಿಗೆ ಸುಖದುಃಖಗಳನ್ನೀಯುತ್ತಾ ಕ್ರೀಡಿಸುವನು. ಹಾಗೆಯೇ ಅವನನ್ನು ದ್ವೇಷಿಸುವರನ್ನು ಶಿಕ್ಷಿಸುವನು.

## ಪ್ರಣವ ಶ್ರೀ ವಿಜಯದಾಸರು ವಿರಚಿಸಿದ ಓಂಕಾರದಿಂದ 51 ವರ್ಣಗಳ ಸೃಷ್ಟಿಯ ಸುಳಾದಿ

### ಧ್ರುವತಾಳ

ಪ್ರಣವ ಮಂತ್ರವ ಗ್ರಹಿಸು ಪ್ರಣುತನಾಗಿ ಸ ।
ಜ್ಜನರುಪದೇಶದಿಂದ ಅನುಗ್ರಹ ನೋಡುವುದು ।
ಅನಾದಿಯಿಂದ ಬಂದ ಅನುಭವಸಿದ್ಧ ಜನಕೆ ಅಮೃತಾಶನ ।
ಪ್ರಣವತಾರಕ ತಾರ ಪ್ರಥಮವ್ಯಾಹೃತಿ ಶೀರ್ಷ ।
ಘನ ಓಂಕಾರ ಆದ್ಯೋಚ್ಚರಣೆ ಬೀಜ ।
ಯಿನಿ ತಾಭಿಧಾನದಿಂದ ವೊಪ್ಪುತದಲೆ ನಿತ್ಯ ।
ಅನಂತ ವರ್ಣಾತ್ಮಕ ಜಡ ಪ್ರಭೇದ।
ಮನುಜಾದಿ ವಿಡಿದು ಬ್ರಹ್ಮಸಿರಿತನ ಕಾಲೋ।
ಚನೆ ಮಾಡುವರು ತಮ್ಮ ಯೋಗ್ಯತದನಿತು।
ಪ್ರಣವ ಮಂತ್ರವೆ ಸರ್ವಮಂತ್ರ ತಂತ್ರಕ್ಕೆಯಿದೆ।
ಜನಕವಾಗಿಪ್ಪದು ಕಲ್ಪ ಕಲ್ಪ।
ಪ್ರಣವಮಂತ್ರವೆ ಗ್ರಹಿಸು ಯಲೋ ಮನವೆ।
ಗುಣಕಾಲ ಕರ್ಮ ವರ್ಣಾಶ್ರಮ ಧರ್ಮರೂಪ ಕ್ರಿಯ।
ಮನೋವಾಕ್ಕಾಯದಲ್ಲಿ ನಿರ್ಮಳನಾಗಿ।
ಎಣಿಸಬೇಕು ಅನುಕ್ರಮದಿಂದಲಿ।
ಪ್ರಣವ ಧ್ಯಾನವಮಾಳ್ಪ ಯಿದರ ವಿಸ್ತಾರವ।
ವನಜ ಸಂಭವನಿದಕೆ ಅಧಿಕಾರನೋ।
ಗುಣತ್ರಯ ಮೊದಲು ಮಾಡಿ ಧರತತ್ವಪರಿಯಂತ।
ಕ್ಷಣಬಿಡದೆ ಯೆಣಿಪ ಬಹು ಅಂಶಿ ಅಂಶ।
ತೃಣ ಜೀವಾದಿ ವಿಡಿದು ಅಂತರ ಬಾಹಿರ।
ಚಿನುಮಯ ಮೂರುತಿ ವಿಜಯವಿಠಲರೇಯ
ಪ್ರಣವ ಪ್ರತಿಪಾದ್ಯನೋ ಅಶೇಷಗುಣಧಾರಕ ॥ 1 ॥

### ಮಟ್ಟತಾಳ

ಅ ಉ ಮ ನಾದ ಬಿಂದು ಘೋಷ ಶಾಂತಾತಿಶಾಂತ।
ಈ ವರಣಳಗುಂಟು ಪ್ರಮಾಣಾತ್ಮಕವೆನ್ನಿ ।
ಈ ವಿಧವನೆ ತಿಳಿದು ಆಕಾರ ಅಪ್ಪರಲಿ ।
ಅವರ್ಗವೆಯೆಂಟು ಉದುಭವಿಸಿದವೆನ್ನು ।
ಕೋವಿದನಾಗಬೇಕೋ ತಿಳಕೊಂಡು ಮಾತ್ರ
ಸಾವಿರ ಶಿರನಮ್ಮ ವಿಜಯ ವಿಠಲರೇಯನ।
ಭಾವದಲಿ ನಿಲಿಸಿ ವೊಲಿಸಿ ವಿಶ್ವಾದಿಗಳ ॥ 2 ॥

### ತ್ರಿವಿಡಿತಾಳ

ಅವರ್ಗ ಹದಿನಾರು ಕ ಪ ವರ್ಗವೆ ಐದು ।
ಈ ವಿಧ ಅಯಿದೈದು ಯಿಪ್ಪತ್ತೈದು ।
ಯ ವರ್ಗ ನಾಲ್ಕು ಕ ವರ್ಗ ಪಂಚಕೊಡೆ ।
ಈ ವರ್ಣಯೆಣಿಸಲು ದಶಪಂಚವೊ ।
ಪಾವಿತ್ರವಾಗಿದೆ ಕ ಷ ಕೂಡಿಸಲಾಗಿ ।
ಕ್ಷ ವರಣವಾಯಿತು ವೊಂದೈವತ್ತು ।
ಆ ವಿಶ್ವಗೆ ಹದಿನಾರು ತೈಜಸಂತರಾತ್ಮ ।
ದೇವಗಳಿಗೆ ಯಿಪ್ಪತ್ತೈದು ಸಿದ್ಧ ।
ಪಾವನ ಪರಮಾತ್ಮ ಜ್ಞಾನಾತ್ಮಗೆ ವೊಂಭತ್ತು ।
ಸೇವಿಸುವುದು ಯಿವು ದ್ವಿತೀಯ ವರಣಾ ।
ಯಾವತ್ತು ಸ್ವರವರಣ ವೊಂದೊಂದು ಬಗೆಯಿಂದ ।
ಆವಾವ ಸ್ವರದಲ್ಲಿ ಕೂಡಿಸಲು
ಕವರ್ಗಾದಿಗೆ ದೀರ್ಘ ಹ್ರಸ್ವ ಕನ್ನೆಮಾತ್ರ ।
ವೋವತ್ತು ಬಿಂದು ವಿಸರ್ಗದಿಂದ ।
ಮೂವತ್ತೈದಕ್ಕೆ ಕೇಳು ವೊಂದಕೆ ದ್ವಿಷಟ್ ಪರಿಯು ।
ಈ ವಿಧ ತಿಳುವಿಂಶತಿಚತುರಶತ ।
ದೇವದೇವೇಶ ನಮ್ಮ ವಿಜಯ ವಿಠಲರೇಯ ।
ಜೀವೋತ್ತಮನಿಂದ ಪೂಜೆಗೊಂಬಲ್ಲಿ ॥ 3 ॥

### ಅಟ್ಟತಾಳ

ಆ ಓಂಕಾರ ಬೀಜ ಯೆಂಟರಿಂದಲಿ ಸತ್ಯ ।
ಈ ವರ್ತಮಾನಕ್ಕೆ ಅಭಿವ್ಯಕ್ತಿಯಾಯಿತು ।
ಅ ವರ್ಗಮಿಗಿಲಾಗಿ ಯಂಟು ವರ್ಗಗಳೈದು ।
ಕ್ಷವೊಂದು ಕೂಡಿಸೆ ಯೇಕ ಪಂಚಾಶತಿ ।
ಸುವರ್ನವಾಗಿ ವೊಪ್ಪುತಿವೆಯಿವು ವ್ಯಾಪ್ತಿ ।
ತಾವುತಾವಿಲಿವುಂಟು ಸ್ವರಸಂಯೋಗವಾಗೆ
ಮೂವತ್ತುಹತ್ತು ಮೇಲೆ ನೂರುಯಿಪ್ಪತ್ತು ।
ಈ ವರ್ಣಗಳೆಲ್ಲ ಗುಣಿತ ಮಾಡಲಾಗಿ ।
ಭಾವಿಸುವುದು ವರ್ಣೋ ವರ್ಣಸಂಯೋಗ ।
ಕ–ವೊಂದಕ್ಕೆ ನೋಡು ಮೂವತ್ತೈದರಂತೆ ।
ಈ ವಿಚಾರ ಮಾತ್ರಕೆ ಎಣಿಸಾಲು ಹದಿನಾಲ್ಕು ।
ಸಾವಿರದೇಳು ನೂರು ಲೇಖ್ಯವನ್ನು ।
ಶ್ರೀವಲ್ಲಭ ನಮ್ಮ ವಿಜಯ ವಿಠಲರೇಯ ।
ಕಾವುತಲಿಪ್ಪನು ಈಪರಿ ತಿಳಿದವನ ॥ 4 ॥

### ಆದಿತಾಳ

ಯಿದರೊಳುಯಿನ್ನುವುಂಟು ಪಾದರ್ಧದಿ ವುಚ್ಚಾರಣೆ ।
ಯಿದೆ ಅನಾಂತಾನಂತ ವರ್ಣಗಳಾಗೋವು ।
ಇದರಲ್ಲಿ ಉಪನಿಷತು ಸರ್ವವೇದಪುರಾಣ ।
ಮುದದಿಂದ ಪಂಚರಾತ್ರ ಬ್ರಹ್ಮತರ್ಕರಾಮಾಯಣ ।
ಸುಧಿಯಾದಿ ಭಾಗವತ ಯೋಗಶಾಸ್ತ್ರಭಾರತ ।
ಪದೊ ಪದಿಗೆ ಕರ್ಮಭೇದ ಮೀಮಾಂಸ ಸಕಲ ನಿರ್ಣಯ ।
ಒದಗಿ ತುಂಬಿಹವು ವೈದಿಕ ಲೌಕಿಕಶಬ್ದ ।
ಯಿದರಿಂದ ಕಮಲಾಸನ ಹರಿಯಲ್ಲಿ ಸಮನ್ವಯ ।
ಉದಯಾಸ್ತಮಾನ ಬಿಡದೆ ದುಃಖಶಾಬ್ದಾತುಚ್ಛಾ ।
ಮೊದಲಾದ ವಾಕ್ಯದಿಂದ ಮಾಡುವ ಮಹಾಜ್ಞಾನಿ ।
ಅದರಕಾರಣಹರಿ ಅಖಿಳವರಣಾತ್ಮಕ ।
ನಿಧಿಯಾದ ಓಂಕಾರ ಪ್ರತಿಪಾದ್ಯನೆನಿಸುವ ।
ಪದುಮೆ ವಿರಂಚಿ ವಾಯು ಖಗ ಶೇಷ ರುದ್ರೇಂದ್ರ ।
ಮದನ ಸೂರ್ಯೇಂದು ಮಿಕ್ಕ ।
ತ್ರಿದಿಶ ಮಾಹಮುನಿ ಸರ್ವಚೇತನಕೆ ಕೂಡೋದಯ್ಯ ।
ಉದಧಿ ದರ್ಶನದಂತೆ ಎಲ್ಲರಿಗೆ ಸಾಧ್ಯವೆನ್ನು ।
ಸದಮಲ ಮೂರತಿ ವಿಜಯ ವಿಠಲರೇಯ ।
ಯದುಕುಲೋತ್ತುಮ ಕಾಣೊ ಭಕ್ತರ ಸಲುಹವ ॥ 5 ॥

### ಜತೆ

ತಾರ ವಿಚಾರ ವಿಚಾರತನದಲಿ ಗ್ರಹಿಸು ।
ಧಾರಕ ಶಕುತಿಯಿಂದ ವಿಜಯ ವಿಠಲ ಬಲ್ಲ ॥ 6 ॥

### ಓಂಕಾರದಿಂದ ಮಂತ್ರಗಳ ಸೃಷ್ಟಿ ಸುಳಾದಿ

ಸತ್ಯ ಸಂಕಲ್ಪ ಸಿದ್ಧ ಅನಾದಿದ್ಯೆವ ।
ಸತ್ಯ ಸತ್ಯವು ನಿನ್ನ ಮಹಿಮೆ ಪ್ರತಾಪ ।
ಸತ್ಯ ನಿನ್ನ ಗುಣಜ್ಞಾನ ಪರಿಪೂರ್ಣ ।
ಸತ್ಯವೆ ನಿನ್ನ ಲೀಲೆ ಜಗವ ನಡಿಸುವುದು ।
ಸತ್ಯವೆ ನಿನ್ನಾನಂದ ಸಕಲೈಶ್ವರ್ಯ ।
ಸತ್ಯವೆ ನಿನ್ನ ಕಪಟನಾಟಕತನವು ।
ಸತ್ಯವೆ ನಿನ್ನ ವ್ಯಾಪ್ತಿ ಅಣೋರಣಿಯಲ್ಲಿ ।
ಸತ್ಯ ಪರಾಕ್ರಮ ವಿಜಯ ವಿಠಲ ನೀನೆ ।
ಸತ್ಯವಂತನಲ್ಲದೆ ಮತ್ತಾರವುಂಟೆ ॥ 1 ॥

**ಮಟ್ಟತಾಳ**

ವರಣ ಭರಿತದಲ್ಲಿ ವರಣ ನಾಮಕನಾಗಿ ।
ವರಣಾಂತರ್ಯಾಮಿ ವರನಾಮಕದಲ್ಲಿ ।
ಕರಿಸಿಕೊಂಡೆ ಓಂಕಾರವೆಂಬೊ ಶಬ್ದಾ ।
..ಕ್ಷರ ಮೂರರಿಂದ ಪರಿಮಿತವಾಗಿ ।
ಪರತರ ದೂರ ವಿಜಯ ವಿಠಲ
ಹಿರಣ್ಯಾ ನಾಭನೆ ಸಿರಿದೇವಿಯರಸ ।
ಸರುವೋತ್ತಮ ಸಗುಣ ಸರ್ವೋತ್ತಮ ಸಗುಣ ॥ 2 ॥

**ತ್ರಿವಿಡಿತಾಳ**

ಆರು ಅಕ್ಷರದಿಂದ ವ್ಯಾಹೃತಿ ಮಂತ್ರ ವಿ ।
ಸ್ತಾರವನು ಮಾಡಿ ಪ್ರಕಾಶಿಸಿದೆ ।
ಸಾರವನು ಹರಹಿ ಚತುರವಿಂಶತಿ ಅ ।
ಕ್ಷಾರದಿಂದಲಿ ಸಾ ಗಾಯತ್ರಿ ಬೆಳಸಿ ।
ಬೇರಿಳಿದಂತೆ ಪುರುಷಸೂಕ್ತ ರಚಿಸಿ ।
ಧಾರವೆನಿಸಿದೆ ಅನಂತ ಶೃತಿಗೆ
ತಾರಕ ಬ್ರಹ್ಮಕೃತು ವಿಜಯವಿಠಲ ವೇದ ಸಂಚರಿಸುತಿಪ್ಪೆ ॥ 3 ॥

**ಅಟ್ಟತಾಳ**

ನಾಶರಹಿತನಾಗಿ ಅಚ್ಯುತನೆನಸಿದೆ ।
ಸಾಸಿರ ಸಂಖ್ಯ ನಿಗಮ ಪ್ರತಿಪಾದ್ಯ ।
ಲೇಸಾಗಿ ಗೋವಿಂದನೆಂದು ಕರೆಸಿಕೊಂಡು
ಭಾಸಿತಾವಾನಂತಾನಂತ ನೆನಿಸಿದೆ ।
ಈಶಾದ್ಯರಿಗೆ ಈಶ ವಿಜಯವಿಠಲನೆ ಸ
ರ್ವೇಶ ಶುದ್ಧ ದೈವವೆ ಅಪ್ರತಿ ॥ 4 ॥

**ಆದಿತಾಳ**

ರಜ್ಯೋಗುಣಾತ್ಮಕವಾದ । ತ್ರಿಜಗವನ್ನು ಪುಟ್ಟಿಸಿ ವ ।
ನಜ ನಾಭಿಯೆಲ್ಲಿಪೊತ್ತು । ಅಜನ ಪಡೆದ ತತ್ವ ।
ವ್ರಜದಲ್ಲಿ ಅಭಿಮಾನ್ಯರ । ಸೃಜಿಸಿ ಸಂಘಟನೆಯಿಂದ ।
ಪ್ರಜಾಪತಿಗೆ ನೇಮಿಸಿ । ನಿಜ ತ್ರಿಧಾಮದಲ್ಲಿ ಪಂ ।
ಕಜ ಪಾಣಿಸೇವೆಯಿಂದಾಂ । ಗಜ ಕೋಟಿ ಲಾವಣ್ಯ ।
ಪ್ರಜಾ ಪತಿಯೆಂಬನಾಮ । ವಿಜಯವಿಠಲರೇಯ ।
ಅಜರಾಮಣ ರಹಿತ । ಅಜಭುಜಗಾದಿದಾತ ।
ಸುಜನರ ಮನೋವಾಸ । ಕುಜನಶೈಲ ಕುಲಿಶ ॥ 5 ॥

**ಜತೆ**

ಅಂತರ ಬಹಿರದೊಳು ವ್ಯಾಪಿಸಿವ್ಯಕ್ತದಲ್ಲಿ ।
ತಂತು ವರ್ಧನಾ ವಿಜಯವಿಠಲ ನೀನದ್ಭುತ ॥ 6 ॥

## 51 ಅಕ್ಷರ ವಿವರ ಅಲ್ಲಿಪ್ಪ ಹರಿರೂಪ ಸುಳಾದಿ

ರಾಗ : ರೇಗುಪ್ತಿ ಧೃವತಾಳ

ಚಿಂತನೆ ಮಾಡು ಮನವೆ ಚಿನ್ಮಯ ದೇವನ್ನ ಯೇ– ।
ಕಾಂತದಲಿ ಯಿದ್ದು ಯೆಲ್ಲ ಕಾಲ ।
ಸಂತರ ವೊಡಗೂಡಿ ಸಾರಿಸಾರಿಗೆ ನಿನ್ನ ।
ಅಂತರಂಗದಲ್ಲಿ ಅಲೋಚಿಸಿ ।
ನಿಂತಲ್ಲಿ ಕುಳಿತಲ್ಲಿ ನಾನಾವ್ಯಾಪರದಲ್ಲಿ ।
ಚಿಂತಿಸು ಶ್ರೀಹರಿಯಾನಂತರೂಪ ।
ಇಂತೆಂತು ನೋಡಿದರಂತೆ ತೋರುತಲಿಪ್ಪ ।
ಮಂತ್ರತಂತ್ರಕ್ಕೆ ಶಿಲುಕನು ಭಕ್ತಿಗೊಶನೊ ।
ಸಂತತ ನಿರ್ದೋಷ ಭಕುತವತ್ಸಲ ಕರುಣಿ ।
ಅಂತಕನಂತಕವು ಉಭಯ ಜೀವಿಗಳಿಗೆ ।
ಸಂತೋಷದಲಿ ಚರಿಯಾಮಾತ್ರ ಲೀಲಾ ।
ಕಂತು ಕೋಟಿ ಲಾವಣ್ಯಮಿಗೆ ಶೋಭಿಸುವ ಆ ।
ದ್ಯಂತ ಕಾಲರಹಿತ ತ್ರಿಗುಣಾತೀತ ।
ಸಂತಾಪನಾಶ ವೊಂದಾರಂಭಿಸಿಕೊಂಡು ।
ನಂತ ಸೂರ್ಯಪ್ರಕಾಶ ತಾರತಮ್ಯದಿ ।
ತಂತು ನಾಳದಲಿಂದ ದಿಗ್ದಂತಿ ಬಿಡಿಸಿಕೊಂಡು ।
ನಿಂತಂತೆ ನಿಂತು ಕೊಂಡಿಪ್ಪ ಮಹಿಮೆ ।
ಎಂತು ಭಾವಿಸಲು ವುಪಾಸ್ತಿಯ ಕೊಡುವ ಶ್ರೀ
ಕಾಂತನು ಪ್ರಸಿದ್ಧದಿಂದ ತಾನೆ ।
ಚಿಂತಯಕ ನಮ್ಮ ವಿಜಯ ವಿಠಲರೇಯ
ಮುಂತಿ (ತೆ) ನಲಿದಡುವ ಭಾಗ್ಯವಬೇಡು ನೋಡು ॥ 1 ॥

**ಮಟ್ಟತಾಳ**

ಕಾ ಮೊದಲು ಕ್ಷಾ ಕಡೆ ಮೂವತ್ತೈದು
ಈ ಮಹವರ್ಣಗಳು ಯಿದರ ವಿವರ ತಿಳಿವುದು ।
ಆ ಮರಿಯಾದಿಗಳು ಪದಿನಾರುಂಟು ।
ವ್ಯೋಮ ವ್ಯಾಪಿಸಿದಂತೆ ಸರ್ವದ ವರ್ಣಗಳು ।
ಸಾಮಸ್ತ ಬಗೆಯಿಂದ ಶಾಸ್ತ್ರ ವೈದಿಕಶಬ್ದ ।

ಭೂಮಿಯೊಳಗಾಡುವ ಲೌಕಿಕ ಶಬ್ದಗಳು ।
ಈ ಮಹ ವರ್ಣದಲಿ ಪ್ರವರ್ತಕವಲ್ಲದಲೆ
ಕಾಮಿಸಿದರೆ ವೊಂದು ಪ್ರಯೋಗ ( ಜನ ) ವಿನ್ನಿಲ್ಲ ।
ಭೂಮ ಭೂತೇಶ್ವರ ವಿಜಯ ವಿಠಲರೇಯನ ।
ನಾಮ ಮೂರ್ತಿಗಳೆಂದು ಚಿಂತಿಸು ಪ್ರಣವದಲಿ ॥ 2 ॥

**ತ್ರಿವಿಡಿತಾಳ**

ಕಾವೊಂದು ಗುಣಿಸಿದರೆ ಹದಿನಾರು ಬಗೆವುಂಟು ।
ಆವಾವ ಕಾಲಕ್ಕೆ ನೋಡಿದರು ।
ಭಾವಿಸು ಕ ಕಿ ಕು ಕೆ ಕೈ ಕೊ ಕೌ ಕಂ ।
ಈ ವಿಧ ಹ್ರಸ್ವಯಿದರಂತೆ ದೀರ್ಘ ।
ಯಾವತ್ತು ಈಪರಿ ಯಿದರಂತೆ ನಿಜವೆಂದು ।
ಕೋವಿದನಾಗಿ ನೀ ತಿಳಿಯಬೇಕು ।
ಕಾ ವರಣದ ರೂಪದಿ ಕಪಿಲಾದಿ ಹದಿನಾರು ।
ಈ ವೊಳಗಿನ ಹದಿನಾರು ರೂಪ ।
ದೇವನ್ನ ನಾಮಗಳು ಅಜಾದಿಗಳ ಸಂಖ್ಯ ।
ಮೂವತ್ತೆರಡು ಭಗವದ್ರೂಪಗಳು
ಪಾವನ ಮೂರತಿ ವಿಜಯ ವಿಠಲರೇಯ
ಆವಾಗ ವರ್ಣಾಧಿಷ್ಠಾನದಲ್ಲಿ ಯಿಪ್ಪ । ॥ 3 ॥

**ಅಟ್ಟತಾಳ**

ಇದರ ವಿಹಿತ ವೊಂದೊಂದು ವರಣಕ್ಕೆ ।
ಅದರಂತೆ ಕ ಚ ಟ ತ ಪ ಯ ಶ ವ ।
ವರ್ಗದಲ್ಲಿ ಯೆಣಿಸಿ ಕಷಮಿಳಿತವಾದ ।
ಇದನ್ನೆಲ್ಲ ಕೂಡಿಸಿ ಪಂಚತ್ರಿಂಶತಿ ಯಾ ।
ದದು ಕಾಣೋ ಯಿದರೋಳು ಅ ಆ ಇ ವುಂ ಎಂಬ
ಹದಿನಾರು ಯಿಡಲಾಗಿ ಕ ಅಃ ವಾದು ।
ಇದನ್ನೆಲ್ಲ ವೊಂದೊಂದು ಯೇ ಕಾಕ್ಷರದಿಂದ ।
ಪದುಮ ನಾಭನು ಕರೆಸಿಕೊಂಬನು ಕೇಳಿ ।
ಅದೆ ಅದೆನಾಮ ಮತ್ತದೆ ಅದೆ ರೂಪದಿ ।
ಒದಗಿ ಯೆಣಿಸಲಾಗಿ ಮೂವತ್ತೆರಡು ನಾಮ ।
ಸದಮಲವಾಗಿವೆ ಅರವತ್ತು ನಾಲಕು ।
ಮೊದಲಾರಂಭಿಸಿ ಮೂವತ್ತೈದಕ್ಕೆ ನೋಡು ।
ಮುದದಿಂದ ಗುಣಿಸಲು ವೊಂದೊಂದು ವರ್ಣಕ್ಕೆ ।

ಅದೆ ಪ್ರಕಾರದಲಿ ಅರವತ್ತು ನಾಲ್ಕುವುಂಟು ।
ಅಧಿಕಾರತನ ಭೇದ ಧ್ಯಾನ ಮಾಡುವುದಕ್ಕೆ ।
ಪದುಮ ಗರ್ಭನೈಯ್ಯ ವಿಜಯ ವಿಠಲರೇಯ ।
ಪದವಿಯ ಕೊಡುವನು ಈಪರಿ ಕೊಂಡಾಡೆ ॥4॥

**ಆದಿತಾಳ**

ಅವನಾದರು ಹಳಿಯಲಿ ಉಗುಳಲಿ ।
ಅವನಾದರು ಬೈಯ್ಯಲಿ ಕಾಯಲಿ ।
ಅವನಾದರು ಹೊಡೆಯಲಿ ತಡೆಯಲಿ ।
ಅವನಾದರು ಪೊಗಳಲಿ ಅಟ್ಟಲಿ
ಅವನಾದರು ವುಣಿಸಲಿ ವುಡಿಸಲಿ ।
ಅವನಾದರು ಛೀ ಛೀ ಯೆನಲಿ ।
ಅವನಾದರು ಥೂಥೂ ಅನಲಿ ಅವನಾದರು ಭಂಗಿಸಲಿ ಮ ।
ತ್ತಾವನಾದರು ಹಿಂಗಿಸಲಿ ।
ಅವನಾದರು ಯೇನೆನನಲಿ ।
ಅವನಾದರು ಈ ವರ್ಣಗಳು ಭಗವನ್ನಾಮಗಳೊ ।
ಜೀವನ ಮುಕ್ತನು ಈ ವಿಧದಿ ತಿಳಿದವನು ।
ನೋವು ನೋವುಗಳಲ್ಲಿ ಪಾವನವಾದ ಭಕುತಿಯಲಿ ಸ್ವ ।
ಭಾವಿತ ನೀನಾಗೊ ಜ್ಞಾನಿ ನೀನಾಗೊ ।
ಯಾವತ್ತು ಯಿಂದ್ರಿಯಗಳ ವ್ಯಾಪಾರ ಸೇವೆ ಶ್ರೀಹರಿಗೆನ್ನು
ತ್ರಿವಿಧ ಜೀವರು ಯಿದನೆ ತೊರೆದು ಮ ।
ತ್ತಾವದು ಆಡುವರೊ ವರ್ಣಗಳಿಲ್ಲದಲೆ ।
ದೇವದೇವೇಶನ್ನ ವೊಲಿಸಬೇಕಾದರೆ ।
ಈ ವುಪಾಯವಬೇಕು ಯೆಲ್ಲಿದ್ದರು ಕೇಳು ।
ಕಾವಜನಕ ನಮ್ಮ ವಿಜಯವಿಠಲರೇಯ ।
ಆವಾವ ವರ್ಣಗಳಂತೆ ವೊಳಗಿದ್ದು ।
ಕಾವನು ಶರಣರನು ವೊಡನೊಡನೆ ಬರುವ ॥5॥

**ಜತೆ**

ಅಕ್ಷರಾಕ್ಷರದಿಂದ ಭಗವನ್ನಾಮವೆ ಚಿಂತಿಸು ।
ಅಕ್ಷರಕ್ಷರ ಪುರುಷ ವಿಜಯವಿಠಲ ಸುಳಿವ ॥6॥

# ೧. ಶ್ರೀ ಗುರುವಿಜಯವಿಠ್ಠಲರ ಉಗಾಭೋಗಗಳು

ಉಗಾಭೋಗ-೧ -ಶ್ರೀ-

ಗುರು ವಿಜಯರಾಯರೊಂದು ಸಮ್ಮುಖದಲ್ಲಿ ಬಂದು । ಪರಿವ್ಯಾಪ್ತ
ನಾದ ಹರಿಯ ವಿವಿಕ್ಷದಿ । ಪರಿಪರಿ ವಿಧದಿಂದಸ್ತುತಿಸಿ ಪ್ರಾಂತ್ಯದಲ್ಲಿ ।
ಗುರುವಿಜಯವಿಠ್ಠಲನ್ನ ಸೇವಕ ನೀನೆಂದು । ಕಾರಣದಿಂದ ನಿನಗೆ ಇದೇ
ಮುದ್ರಿಕವು ಎಂಬ । ತೆರವಾದ ಸಂಜ್ಞವೆಂದು ಸೂಚಿಸಿದಿ । ಪರಮ ಧನ್ಯನಾದೆ
ಗುರು ವಿಜಯದಾಸರಿಗೆ । ಚರಣ ಸೇವಕನಾದೆ ನಿನ್ನ ದಯದಿ । ಗುರುಗಳ
ದ್ರೋಹದಿಂದ ಮುಕ್ತನಾಗಿ ನಿನ್ನ । ಕುರುಹು ಕಾಣುವ ಅಧಿಕಾರಿಯಾದೆ ।
ಪರಿಪೂರ್ಣ ಕೃಪಾನಿಧೆ ಗುರುವಿಜಯವಿಠ್ಠಲ ನಿನ್ನ । ಕರುಣದ ಫಲವಿದೆ
ಬಾಳಿದದಕೆ ॥ ಶ್ರೀಮದ್ವೇಶಾರ್ಪಿತವು.
(ರಾಕ್ಷಸನಾಮ ಸಂ ॥ ಮಾರ್ಗಶಿರ ಬ ॥ ಸಪ್ತಮಿ ಶುಕ್ರವಾರ ಶಾ॥ ಶಕೆ ೧೭೭೭)

ಉಗಾಭೋಗ-೨ -ಶ್ರೀ- ತ್ರಿವಿಡಿತಾಳ

ಭಕ್ತವತ್ಸಲನೆಂಬ ಬಿರಿದುಳ್ಳದೇವ ನಿನ್ನ । ಭಕುತಿ ಯಿಂದಲಿ ನಮಿಸಿ
ಬಿನ್ನೈಸುವೆ ॥ ರಿಕತನ ಬಿನ್ನಪವ ಮನಕೆ ತಂದುವೇಗ ಆ । ಸಕುತಿಯಿಂದಲಿ
ಗ್ರಹಿಸಿ ಸಫಲಮಾಡೊ । ಭಕುತನಾದ ಇವಗೆ ಲೌಕಿಕದಿಂದ ಬಂದ ।
ವಿಕಟರೂಪವಾದ ದುರಿತದಿಂದ । ಮುಕುತನ್ನ ಮಾಡುವದು ಕರುಣದಿಂದಲಿ
ವೇಗ । ಶಕಟಭಂಜನ ಶ್ರೀಕೃಷ್ಣ ।ವುತ್ಕೃಷ್ಟನು ನೀ ಮುಕುತಿದಾಯಕ
ಗುರುವಿಜಯವಿಠ್ಠಲ । ಮದ್ಭಕ್ತನ ಪ್ರಣಶ್ಯತಿ ಎಂಬೋದು ಸತ್ಯಮಾಡು ॥

ಉಗಾಭೋಗ-೩ -ಶ್ರೀ- ಮಟ್ಟತಾಳ

ಭಕ್ತರ ಮನೋರಥ ಪೂರ್ಣಮಾಡುವಲ್ಲಿ । ಉಕ್ತವಾದ ಕಾಮಧೇನು
ಎನಿಪೆ । ಭಕ್ತರ ಅಪರಾಧ ಸಹನ ಮಾಡುವರಲ್ಲಿ ದಾರಿತ್ರಿಯೊಳಗೆ ಸಮಾನ
ನೆನಿಪ ಸಾರ್ವ ಭೌಮ । ಭಕ್ತರ ಮ್ಯಾಲೆ ಮಹ ಕರುಣ ಮಾಡುವಲ್ಲಿ ಪಿತೃ ಮಾತೃ
ಗುರು ಭ್ರಾತೃ ಸಮಾನ ನೆನಿಪೆ ।
ಭಕ್ತರ ಅಭಿಮಾನ ಸಹನೆ ಮಾಡುವಲ್ಲಿ ಮಿತ್ರನೆನಿಸಿಕೊಂಬೊ
ಅನಿಮಿತ್ತ ಬಂಧು । ಭಕ್ತರ ದುರಿತ ಕಳದು ಕಾವ ವಿಷಯದಲ್ಲಿ । ಛತ್ರ ನೆನಿಪೆ ಸತತ
ಸನ್ಮಂಗಳಾಂಗ । ಭಕ್ತರ ನಿಂದಕರ ನಿಗ್ರಹ ಮಾಡುವಲ್ಲಿ ಮೃತ್ಯು ಯಮ ಸದೃಶನೆನಿಪ
ದೇವ । ಭೃತ್ಯವತ್ಸಲ ಗುರುವಿಜಯವಿಠ್ಠಲರೇಯ । ಭಕ್ತರ ಪೊರೆವ ಬಿರಿದು ನಿನ್ನದಯ್ಯಾ॥

ಉಗಾಭೋಗ-೪ -ಶ್ರೀ- ಮಟ್ಟತಾಳ

ಶತೃಮಿತ್ರಗಳಲ್ಲಿ ಸಮಸ್ಥಿತನಾಗಿ ನೀನೆ । ಪ್ರಕೃತಿ ಜೀವಕಾಲ ಅನು ಸರಿಸೀ ।
ಕೃತ್ಯವಗಳ ಮಾಳ್ಪವನಾಗಿ ಜೀವರ್ಗೆ ಸುಖಃದುಃಖ।
ಮೊತ್ತಗಳುಣಿಸುವಿ ನಿಯಮದಂತೆ । ಕರ್ತೃನೆಂದು ನಿನ್ನ ನೆರೆನಂಬಿ ಇಪ್ಪವಂಗೆ

ದುಷ್ಕೃತ್ಯಗಳಿಲ್ಲವೆಂದು ಶಾಸ್ತ್ರಸಿದ್ಧ । ಚಿತ್ತಕ್ಕ ತಂದು ವೇಗ । ಶತ್ರು ಸಹಸವನ್ನು
ವ್ಯರ್ಥಮಾಡಿ ಭಕ್ತನಾದವನ । ಹತ್ತಿಲಿ ಕರೆದು ದಯದೃಷ್ಟಿಯಿಂದಲಿ ನೋಡಿ
ಉತ್ತಮವಾದ ಸುಖವೈದಿಪದೊ । ಭಕ್ತವತ್ಸಲ ಗುರುವಿಜಯವಿಠ್ಠಲರೇಯ
ಎತ್ತಲಿದ್ದರು ನಿನ್ನ ಪೊಂದಿದವನು ॥
(೨, ೩, ೪ ಈ ಮೂರು ಉಗಾಭೋಗಗಳು ಕಲ್ಲೂರು ಕುಲಕರ್ಣಿ ಕೃಷ್ಣಪ್ಪನವರ
ಮೇಲೆ ಆಪತ್ತು ಬಂದಾಗ ಮಾಡಿ ಮಂತ್ರಾಕ್ಷತಿ ಸಹ ಕೊಟ್ಟು
ಆಪತ್ತು ಪರಿಹರಿಸಿದುದು)

ಉಗಾಭೋಗ-೫ -ಶ್ರೀ- ಮಟ್ಟತಾಳ

ದೈತ್ಯನ್ನ ವಧೆಗಾಗಿ ಶಪಥ ಮಾಡಲಾಗಿ । ಕೃತ್ತಿ ವಾಸನ ದ್ವಾರ ಕೃಪೆಯು ಮಾಡಿ ।
ಸುತ್ತ ಕಾದಿದ್ದ ಆಪ್ತ ಮಿತ್ರರು ರಕ್ಷಿಸುತ್ತಿರೆ । ಕತ್ತಲೆ ಗೈಸಿ ಶಿರ ಕಿತ್ತಿ ಚಂಡಾಡಿಸಿ ।
ಭಕ್ತನ ಪ್ರತಿಜ್ಞೆ ಗೆಲಿಸಿದಂಥ । ಸತ್ಯವಾದ ರೂಢಿ ತ್ರಿಜಗವು ಬಲ್ಲದು ।
ಪೃಥ್ವಿ ಪಾಲಕನಾದ ಸಾರ್ವಭೌಮಂಗೆ ಪರಮ । ರಿಕ್ತ ಅನುಬಂಧ ಪೇಳಿ ಹಿಗ್ಗುವಂತೆ
ಉತ್ತಮೋತ್ತಮ ನಿನ್ನ ಇನಿತು ತಿಳಿದು । ಭಕ್ತಿ ಇಲ್ಲದಲೆ ಸಥೆಇಂದ ನುಡಿದಂಥ ।
ಉಕ್ತಿಗೆ ವ್ಯಾಹತಿ ತಂದದಕೆ ನಿನ್ನ । ಮಿತ್ರತ್ವ ಏನುಂಟು ಇದರೊಳಗೆ ।
ಭೃತ್ಯರ ಅಭಿಮಾನ ಕಾಯದಿದ್ದರೆ ಒಡೆಯ ಕೀರ್ತಿ ಯ್ಯೆದುವನೇನೊ ಮಾನ್ಯನಾಗಿ ।
ಸತ್ಯಸಂಕಲ್ಪ ಗುರುವಿಜಯವಿಠ್ಠರೇಯ । ಈ ತೆರದಲಿ ಮಾಡದಿರು ಎಂದಿಗನ್ನ ॥

ಉಗಾಭೋಗ-೬ -ಶ್ರೀ-

ಇನ್ನೆಷ್ಟು ಕಾಲಕ್ಕೆ ಮರಿಯಾದಂತೆ ಮಾಡಿಸಿದಿ । ಉನ್ನತ ಮಹಿಮ ನಿನ್ನ ಇಚ್ಛಕ್ಕೆ ಯಿದಿರಾರೊ । ಇನ್ನಾದರೊ ನೀ ಕೃಪೆಇಂದ ನೋಡದಿರೆ ಘನ್ನವಾದ ದುಃಖದಿಂದ ಕಡಿಗೆ ಐದುವಿನೆಂತೊ । ಚಿನ್ಮಯ ಮೂರುತಿ ಗುರುವಿಜಯವಿಠ್ಠರೇಯ । ಯೆನ್ನ ಅಪರಾಧವು ನಿನಗರ್ಪಿತವು ॥

ಉಗಾಭೋಗ-೭ -ಶ್ರೀ-

ವಿಜಯ ನಾಮವು ಎನಗೆ ಸಾರ್ಥಕ ಮಾಳ್ಪದಿಂದು । ಕುಜನ ಮರ್ದನ
ನಿನಗೆ ನೀನೆ ಒಲಿದು । ವಿಜಯ ಸಾರಥಿ ಎನಿಸಿ ಎನ್ನಲ್ಲಿ ನಿಲ್ಲದಿರೆ ।
ವಿಜಯ ನಾಮವು ಸಫಲವಾಗುವದೇ । ಭುಜಗ ತಲ್ಪನೆ ಈ ಸೊಬಗು ಧೃಡವಾಗದಲೆ
ಕುಜನ ಮಣಿಯಾದ ಕಲಿ ಕೃತ ಕಲ್ಮಷದಿ । ರಜ ತಮೋ ಗುಣದಿಂದ ಬದ್ಧನಾಗಿ ।
ಅಜಯ ವುಳ್ಳವನಾದೆ ಬಲು ವತ್ಸರವು ನೋಡು । ವಿಜಯ ಸಖನೆಂಬ ಕರುಣ ವಿತ್ತೇ।
ಸುಜನ ಪೋಷಕನೆ ಕೇಳಂದು ಸ್ವಪ್ನದಲಿ । ನಿಜವಾಗಿ ದಶನಾಮ ಸಫಲ ಮಾಳ್ಪನೆಂದು
ನಿಜ ಮುಖದಿಂದ ಪೇಳಿದದನು ವೇಗ । ತ್ಯಜನೆ ಮಾಡದೆ ವಾಕ್ಯ ತಂದುಕೋ
ಮನನಕ್ಕೆ । ಸುಜನ ಕುಲಾಬ್ಧಿಚಂದ್ರ ಸುಗುಣ ಸಾಂದ್ರ । ವೃಜಿನಗಳೆಣಿಸದೇ ತ್ವರಿತದಿಂದಲಿ
ಎನಗೆ । ವಿಜಯನಾಮವು ಸಫಲ ಮಾಡುವದು । ಭುಜಗ ಭೂಷಣ ವಂದ್ಯ

ಗುರುವಿಜಯವಿಠ್ಠರೇಯ ।
ಋಜುಮಾರ್ಗವನೆ ಇತ್ತು ಪಾಲಿಸುವದು ॥
(ಶಕೆ ೧೭೭೯ ಪಿಂಗಳನಾಮ ಸಂ ॥ ಆಶ್ವೀಜ ಶು ॥ ದಶಿಮಿ)

ಉಗಾಭೋಗ-೮ -ಶ್ರೀ-

ಶಕ್ತಿ ಆಯುಧದಿಂದ ಸಲಹಿದೆ ನೆಂಬೊ ಘನತಿ । ವ್ಯಕ್ತಿ ಮಾಡಿಕೊಂಡು ಭುವನದಲ್ಲಿ ॥ ಭಕ್ತವತ್ಸಲ ನೆಂಬೊ ಬಿರಿದು ಮಾತ್ರಕೆ ಪಡೆದಿ । ಭಕ್ತನಲ್ಲಿ ನಿನಗೆ ವಾಂಛಲ್ಯ ನಿಜವಾಗೆ ವಿಭಕ್ತವಾಯಿತು ಯಾಕೆ ಇಂದು ನೊಡ ಅ । ಯುಕ್ತವಾದ ಘೋರ ಸಂಸಾರದಲ್ಲಿ ತಂದು । ನಕ್ತಂಚರರಿಗೆ ಸಹಾಯನಾಗಿ । ಹೊತ್ತು ಹೊತ್ತಿಗೆ ಪ್ರವಹ ರೂಪವಾದ ದುಃಖ । ಯುಕ್ತನ ಮಾಡಿ ಬಲು ದಣಿಸಿದದಕೆ ಪೊ । ರ್ವೋಕ್ತವಾದ ಕೃಪೆ ಸಹಜವಾಗಿದೆ ಕೃಷ್ಣ ಪ್ರ । ಸಕ್ತ ವಾಯಿತ್ಯಾಕೆ ಇನಿತು ಕಠಿಣತನ । ಶುಕ್ತಿಯಲ್ಲಿ ರಜತ ಭ್ರಾಂತಿಯು ತೋರಿದಂತೆ । ಸಕ್ತನೆ ನಿನ್ನ ಕರುಣ ಯಿನಿತಾಯಿತೊ । ಸತ್ಯ ಮಂಗಳ ಮೂರ್ತಿ ನಿನಗೆ ನಿನ್ನ ಕ್ರಿಯಕ್ಕೆ ಅ । ಸತ್ಯ ವೆಂದಿಗುಸಲ್ಲ ಶ್ರುತಿ ಸಮ್ಮತ । ಭೋಕ್ತಸಾರನೆ ಗುರುವಿಜಯವಿಠ್ಠರೇಯ । ಉಕ್ತಿಗೆ ವ್ಯಾಹತಿ ಬಾರದಂತೆ ನೋಡೊ ॥

ಉಗಾಭೋಗ-೯ -ಶ್ರೀ-

ಅಂದಿನ ಗುರು ದ್ರೋಹದಿಂದ ಈ ಕುಂಭಿಣಿಗೆ । ಬಂದು ಬಾಹುಳ್ಯ ನೀಚ ದೇಹ ಧರಿಸಿ । ವೃಂದ ಕಾಮಗಳಿಂದ ಜನಸಿದ ಕ್ರೊಧ ಲೋಭ । ಸಂದೋಹ ಜನಕ ಸುಖ ದುಃಖ । ಶಿಂಧುವಾಲಿನೋಳು ಮುಣಗಿಸಿ ಪರಮಾಪ್ತನಾದ । ಇಂದಿರಾಪತಿ ನಿನಗೆ ದೂರನಾದೆ । ಒಂದೊಂದು ಉಪಾಯದಿಂದ ನೀನೆ ಯುಕ್ತಿಗೆ ಸಮ ಉಂಟೆ । ತಂದೆ ನಿನ್ನಯ ಪಾದ ದ್ವಂದ್ವಕ್ಕೆ ನಮಿಸುವೆ । ಎಂದೆಂದಿನಿತು ಮಾಳ್ಪದುಚಿತವಲ್ಲಾ । ಮಂದರಧರ ನೀನು ಕರುಣ ಮಾಡುವದಕ್ಕೆ । ಎಂದೆಂದಿಗಾದರು ದ್ವಾರವಿದೆ । ಎಂದು ಬಿನ್ನೈಸಿದೆ ಬಲುವಿಧದಿಂದ ನಾನು । ಕಂದನ ಬಿನ್ನಪವ ಮನಕೆ ತಂದು ಅವ । ರಿಂದ ನುಡಿಸಿದ ನುಡಿಯು ವೇಗದಿಂದ । ಅಂದವಾಗಿ ಸಫಲ ಮಾಡುವದು । ಬಂದು ಅನಿಮಿತ್ತ ಗುರುವಿಜಯವಿಠ್ಠಲರೇಯ । ನೆಂದು ಕೊಂಡಾಡಿದರ್ಗೆ ಭಯವಿಲ್ಲ ಭಯವಿಲ್ಲ ॥
(ಪಿಂಗಳ ಸಂ॥ ಕಾರ್ತೀಕ ಬ॥ ಸಪ್ತಮಿ ಆದಿವಾರ)

ಉಗಾಭೋಗ-೧೦ -ಶ್ರೀ- ಮಟ್ಟತಾಳ

ಮೂರು ವರಗಳನ್ನು ಮೋದದಲಿತ್ತು । ಸಾರಸ್ವರೂಪ ಸುಖದಲಿ ಇನ್ನು ಜೀವಿಸೆಂದು ನೀರಜಾಕ್ಷನೆ ನೀನೇವನೇ ಕರುಣಾ ಮಾಡಿದುದಕೆ । ಶಾರೀರೇಂದ್ರಿಯಗಳಿಗೆ ಸುಖ ವಾಯಿತೋ । ವಿವರ ತಿಳಿಯಲಿಲ್ಲ ಮೂರು ಬಗೆಯಿಂದ । ಪುರುಷಾರ್ಥ ಸ್ವರೂಪವ। ಗುರು ವಿಜಯರಾಯರೆಂದು ಗೂಢ ಮಾತಿಲಿಂದ । ಮೂರು ವರಗಳು ಇತ್ತು ಬುದ್ದಿ ಪೇಳಿ । ಪ್ರೇರಿಸಲಿಲ್ಲೆಂಬ ಸ್ಪಷ್ಟತ್ವ ವಾಗಿ ಎನಗೆ । ವಾರಿಜಾಕ್ಷನೆ ಇಂದು ನೀನದರಂತೆ ಮೂರು ವರಗಳ ಸೌಖ್ಯ ವೈದೆ ಯೆಂದು । ಔದಾರ ಮನಸಿನಿಂದ ಪೇಳಿದಲ್ಲದೆ ।

ತೋರಿಸಲಿಲ್ಲ ಅದರ ಕುರುಹು ಸಂಜ್ಞವನ್ನು । ಸಾರ ಸುಗುಣ ಪೂರ್ಣನೆ ನಿರ್ಮಲಾತ್ಮ।
ಮೂರು ವಿಧವಾದ ಶಾಪ ತೀರದ ಬಗೆಯೋ ಮಾರಾರಿ । ವಂದ್ಯನೆ ಕರುಣಮಾಡಿ।
ಮೂರರಾಜ್ಞಾರೂಪ ತಿಳುಹಿ ವೇಗದಿಂದ । ಸಾರ ಸುಜನ ಕಾರ್ಯ ವಾಗುವಂತೆ ।
ಕಲ್ಪಿಸುವದು ಬರಿದೆ ದಂಧನ ವ್ಯಾಕೆ ಬಲು ಮೋದ ದಯಸಿಂದು ಕೃಷ್ಣ ಅ । ಪಾರ
ಮಹಿಮನೆ ಅಮಿತ ತೇಜ । ಕ್ರೂರ ಗಜಕೆ ಹರಿ ಗುರುವಿಜಯವಿಠ್ಠಲರೇಯ ।
ತೋರಿಸಯ್ಯಾ ಚರಣ ತ್ವರದಿಂದ ॥
(ಶ್ರಾವಣ ಶು ॥ ೨ ಸ್ಥಿರವಾರ)

ಉಗಾಭೋಗ-೧೧ -ಶ್ರೀ-

ಉದ್ಯುಕ್ತರಾಗಿ ಎನ್ನ ಯೋಗ್ಯತ ಇದ್ದನಿತು ಸದ್ವಿರಾಗ ದಿಂದ ಧೇನಿಸುತ್ತ ।
ಹೃದ್ವನಜನದಲ್ಲಿ ಪೋಗಿ ಕೈಮುಗಿದು ನಮಿಸಿದರು। ಭದ್ರ ಮೂರುತಿ ನಿನ್ನ ಕುರುಹ
ಕಾಣಿಸಿ ಕೊಳದೆ । ಎದ್ದು ಪೋಗುವಂತೆ ಮನಸು ಮಾಡಿ । ಕ್ಷುದ್ರವಾದ ವಿಷಯ
ಜಾಲಗಳು ಎರಗಿಸಿ ಸಮುದ್ರ ಪೋಲುವ ದುಃಖ ವುಣಿಸಿ ಮರಳೆ । ಬುದ್ಧಿ
ಭ್ರಮಣವಾಗಿ ಇರುವ ಸಮಯದಲ್ಲಿ ಅ । ಶುದ್ಧವಾದ ಹೀನಸ್ಥಳದಲ್ಲಿ । ಮುದ್ದು
ಮೋಹನವಾದ ರೂಪದಿಂದಲಿ ತೋರಿ । ಬುದ್ಧಿಗೆ ವ್ಯಾಕುಲ ತೋರ್ಪದೇನೊ ।
ನಿದ್ರರಹಿತ ಇಂತು ವಿನೋದ ಮಾಡಿದರೆ । ಬದ್ಧನಾದ ಎನಗೆ ಸುಖವಾಹದೇ ।
ಕದ್ರುಗೀಶಯನ ನಿನ್ನ ಮನೋ ವಚನ ಕಾಯದಿಂದ । ಪಾದ ಪದ್ಮಕ್ಕೆರಗಿದ
ಮ್ಯಾಲೆ ಇನಿತು ಮಾತೇ । ಮಧ್ವಾಂತರ್ಗತ ಗುರುವಿಜಯವಿಠ್ಠಲರೇಯ ।
ಶುದ್ಧಾನಂದವಿತ್ತು ವಷಯನಾಗು ॥

ಉಗಾಭೋಗ-೧೨ -ಶ್ರೀ-

ಒಂದು ಸ್ಮರಿಸುತಿರೆ ಆನಂದ ವಾಗುತ್ತದೆ ಮ । ತ್ತೊಂದು ಸ್ಮರಿಸುತಿರೆ ಕ್ಲೇಶವಹದೋ।
ಕುಂದು ಲೇಸಗಳು ಕಾಲಭೇದದಿಂದ ಸಂಭಂಧಗೈಸಿದೆನಗೆ ಸಾರ್ವಭೌಮಾ । ಇಂದಿರಾಪತಿ
ನಿನ್ನ ಸತ್ಯಸಂಕಲ್ಪವ ಮಂದನಾದವನಾನು ದಾಟುವೇನೇ । ಅಂದುಮಾಡಿದ ಕರುಣ
ಒಂದೊಂದು ಸ್ಮರಿಸುತಿರೆ ತಂದೆ ಎನ್ನಯಾ ಭಾಗ್ಯಕ್ಕೆ ಯಣಿಸಿ ಗುಣಿಸಿ ನೋಡೆ ।
ಕುಂದಿಗೆ ಸಮ ಉಂಟೆ ವಸುಂಧರಿಲಿ । ಮಂದರೋದ್ಧಾರ ಗುರುವಿಜಯವಿಠ್ಠಲ ನಿನ್ನ
ಹೊಂದಿದವ ಗಿನಿತು ಫಲವೇನೊ ॥

ಉಗಾಭೋಗ-೧೩ -ಶ್ರೀ-

ಯಮನಾಮ ಸಂವತ್ಸರಕ್ಕೆ ಐವತ್ತೆಂಟು ವತ್ಸರ ವಾಯಿತು । ದೇವಕೀ ನಂದನ ನೀ
ಬಲ್ಲಿ । ಭಾವ ಶುದ್ಧವಾ ಮಾಡಿ ಪಾಲಿಸೊ । ದೇವ ಮುನಿವಂದ್ಯ ಶ್ರೀಪತಿ ದೇವತರುಧೇನು
ಮಣಿ ದೇವಿ ಭಾರತೀಪತಿ ಪಂಚಮುಖಿಯ ವೀರ ಹನುಮ ದೇವರ ದೇವ ಕೌರವಾಂತಕ
ಸುಖಮುನಿ ವಂದ್ಯಾ ಗುರುವಂತರ್ಯಾಮಿ ಗುರುವಿಜಯವಿಠ್ಠಲರೇಯ ಭಾವಿಸಿ
ಎನ್ನುದ್ಧರಿಸೋ ಬೇಗಾ ॥

( ಶ್ರೀ ಉಪ್ಪಲಿ ಗುರುಮಧ್ವರಾಯರ ಸಂಗ್ರಹ)

ಉಗಾಭೋಗ–೧೪

-ಶ್ರೀ-

ಪಯಣವಾಗುವುದಕ್ಕೆ ಎಳ್ಳಿನಿತಾದರು ಅಸೂಯ ಪುಟ್ಟದು ನಿನ್ನ ಪಾದಸಾಕ್ಷಿ । ಮಾಯಾರಮಣ ನಿನ್ನ ನೋಡದಲಿಪ್ಪ ಸ್ಥಾನ ಪೂಯಾಲೆ ಸಹವಾಗಿ ತೋರುವುದು ಎನಗೆ, ಕಾಯದೊಳಗೆ ಇದ್ದು ಪ್ರೇರಕನಾದವಂಗೆ, ನೇಯವಲ್ಲವೋ ನಾನು ಪೇಳ್ವದಕ್ಕೆ ಕಾಯಜಪಿತ ವಂದು ಕಾಮವುಂಟು ಲೇಶ ನೋಯಲೀಸದೆ ಮನಕೆ ತೋರಲಿಬೇಕು। ಶ್ರೀಯರಸನೆ ಇದಕೆ ವ್ಯವಧಾನ ಮಾಡದಲೇ ಪರಿಯಾಪ್ತಿ ಮಾಡುವದು ಪರಮ ಪುರುಷ ವಾಯು ಸಂಸ್ಥಿತನಾದ ಗುರುವಿಜಯವಿಠ್ಠಲರೇಯಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥

*-*-*-*-*-*

**ಪಂಚೀಕರ್ಣ**

| **ಆಕಾಶ**<br>ಬುದ್ಧಿ ಪತಿ ಗಣಪತಿ | **ವಾಯು**<br>ಪ್ರಾವಹೀಪತಿ<br>ಪ್ರವಾಹವಾಯು | **ತೇಜ**<br>ಸ್ವಾಹ ಪತಿ ಅಗ್ನಿ | **ಆಪ**<br>ಭಾಗೀರಥೀಪತಿ<br>ವರುಣ | **ಪೃಥ್ವಿ**<br>ಧರಾಪತಿ<br>ಶನೈಶ್ವರ |
|---|---|---|---|---|
| ಅಂತಃಕರಣ<br>ರತಿ ಪತಿ ಮನ್ಮಥ | ಸಮಾನವಾಯು | ಶ್ರವಣ<br>ದಿಕ್ ದೇವತೆಗಳು | ಶಬ್ದ<br>ತಾರಾಪತಿ ಬೃಹಸ್ಪತಿ<br>(ಪ್ರಾಣ) | ವಾಕ್<br>ಸ್ವಾಹ ಪತಿ ಅಗ್ನಿ |
| ಬುದ್ಧಿ<br>ಸೌಪರ್ಣಿಪತಿ ಗರುಡ | ಉದಾನವಾಯು | ತ್ವಕ್<br>ನಾಸಿಕವಾಯು | ಸ್ಪರ್ಷ<br>ಅಪಾನವಾಯು | ಪಾಣಿ<br>ಪ್ರಸೂತಿ ಪ್ರತಿ ದಕ್ಷ |
| ಮನಸ್ಸು<br>ವಾರುಣಿ ಪತಿ ಶೇಷ | ವ್ಯಾನವಾಯು | ನೇತ್ರ<br>ಸೌಜ್ಞ ಪತಿಸೂರ್ಯ | ರೂಪ<br>ವ್ಯಾನವಾಯು | ಪಾದ<br>ಇಂದ್ರಪುತ್ರ ಜಯಂತ |
| ಚಿತ್ತ<br>ಶಚಿ ಪತಿ ಇಂದ್ರ | ಅಪಾನವಾಯು | ಜಿಹ್ವ<br>ಗಂಗಾ ಪತಿ ವರುಣ | ರಸ<br>ಉದಾನವಾಯು | ಪಾಯು<br>ಸಪತ್ನಿ<br>ಮಿತ್ರನಾಮಕ ಸೂರ್ಯ |
| ಅಹಂಕಾರ<br>ಉಮಾಪತಿ ರುದ್ರ | ಪ್ರಾಣವಾಯು | ನಾಸಿಕ<br>ಉಷಾ ಪತಿ<br>ಅಶ್ವಿನಿ ದೇವತೆಗಳು | ಗಂಧ<br>ಸಮಾನ ವಾಯು | ಉಪಸ್ಥ<br>ಶತರೂಪ ಪತಿ<br>ಸ್ವಯಂಭುವ ಮನು |

**ಈ ಪುಸ್ತಕದಲ್ಲೇನಾದರೂ ಲೋಪ-ದೋಷಗಳು ಕಂಡುಬಂದಲ್ಲಿ ಈ ಕೆಳಗಿನವರನ್ನು ಸಂಪರ್ಕಿಸಿ ತಮ್ಮ ಸಲಹೆ-ಸೂಚನೆಗಳನ್ನು ಮುಂದಿನ ಮುದ್ರಣದಲ್ಲಿ ತಿದ್ದುಪಡಿ ಮಾಡಿಕೊಳ್ಳಲಾಗುವುದು.**

**ಶ್ರೀ ಬಾಲಗೋಪಾಲದಾಸರು : 9480307593**

**ಶ್ರೀ ಎಸ್. ಆರ್. ಕಟ್ಟಿ : 9845653504**

**ಶ್ರೀ ಮಧುಸೂದನ್ ಕುಲಕರ್ಣಿ : 7795108108**

ಶ್ರೀ ಗುರುಸಾರ್ವಭೌಮರು ಮಂತ್ರಾಲಯ



ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮ ರತಾಯಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥



ದಾಸ ಸಾಹಿತ್ಯ ಸೇವೆಗೆ ತಮ್ಮ ಜೀವನವನ್ನು ಮುಡುಪಿಟ್ಟು ಅನೇಕ ದಾಸರಾಯರ ಕೃತಿಗಳಾಧರಿಸಿ ಅನೇಕ ಚಿತ್ರಪಟಗಳನ್ನು ರಚಿಸಿ ಅನೇಕ ಗ್ರಂಥಗಳ ಪ್ರಕಾಶನಗೊಳಿಸಿ ಶ್ರೀ ಶೇಷದಾಸರ ಆರಾಧನೆಯನ್ನು ಹಲವಾರು ಕ್ಷೇತ್ರದಲ್ಲಿ ಮಾಡುವುದರ ಮೂಲಕ ಅವರ ಕೀರ್ತಿ ಚಂದ್ರಿಕೆಯನ್ನು ಹರಡಿಸಿ ತಮ್ಮ ಸಾಧನೆಯ ಮೂಲಕ ಪಂಡಿತರು ಪಾಮರರನ್ನು ಆನಂದಗೊಳಿಸಿ ಅನೇಕ ಮಾಧ್ವ ಪೀಠಾಧಿಪತಿಗಳಂದ ಪ್ರಶಂಸನೆ ಮಾಡಿಸಿಕೊಂಡ ಖ್ಯಾತಿ ಶ್ರೀ ಗುರುಮಧ್ವರಾವ್ ಉಪ್ಪಲಿ ಅವರದು. ಅವರಿಗೆ ಈ ಗ್ರಂಥವು ಸಮರ್ಪಿತವು.

ಗು ಎಂದು ನುಡಿಯಲು ಗುರುವಾಗಿ ಪೊರೆವ
ರು ಎಂದು ನುಡಿಯಲು ರುಜಿನಗಳೋಡಿಸುವ
ಮ ಎಂದು ನುಡಿಯಲು ಮಾತರಿಶ್ವನ ದಯದಿ
ಧ್ವ ಎಂದು ನುಡಿಯಲು ಅರಿಗಳ ಧ್ವಂಸಿಸುವ

ಓಂ ಶ್ರೀ ಗುರುಮಧ್ವದಾಸ ಗುರುಭ್ಯೋನಮಃ

ಪ್ರಕಾಶಕರು : ಶ್ರೀ ಗುರುಮಧ್ವರಾವ್ ಉಪ್ಪಲಿ ಕೃಪಾಪೋಷಿತ ಶ್ರೀ ಶೇಷದಾಸರ
ಆರಾದನಾ ಸೇವಾ ಸಂಘ, ಬೆಂಗಳೂರು